## ರಮಣಾಶ್ರಮದ ಪತ್ರಗಳು

# ರಮಣರ ಸನ್ನಿಧಿಯಲ್ಲಿ

## ನಡೆದ ಘಟನೆಗಳ ವಿವರಣೆ







ಭಗವಾನ್ ಶ್ರೀ ರಮಣ ಮಹರ್ಷಿ

ರಮಣಾಶ್ರಮದ ಪತ್ರಗಳು

# ರಮಣರ ಸನ್ನಿಧಿಯಲ್ಲಿ

ನಡೆದ ಘಟನೆಗಳ ವಿವರಣೆ

ತೆಲುಗು ಮೂಲ :
**ಸೂರಿ ನಾಗಮ್ಮ**

ಕನ್ನಡ ಅನುವಾದ :
**ಡಾ|| ಕೆ. ಎ. ನಾರಾಯಣನ್**

ಪ್ರಕಾಶಕರು :
**ರಮಣ ಮಹರ್ಷಿ ಸೆಂಟರ್ ಫಾರ್ ಲರ್ನಿಂಗ್**
40/41, 2ನೇ ಅಡ್ಡರಸ್ತೆ, ಲೋಯರ್ ಪ್ಯಾಲೆಸ್ ಆರ್ಚರ್ಡ್ಸ್
ಬೆಂಗಳೂರು–560 003 ದೂರವಾಣಿ : 369633

ಮೊದಲ ಆವೃತ್ತಿ—ಜುಲೈ 1991
1000 ಪ್ರತಿಗಳು
ISBN—81—85378—12—6



ಬೆಲೆ : 20/– ರೂಪಾಯಿಗಳು

"This book is published with the financial assistance of Tirumala Tirupati Devasthanams under their scheme—Aid to Publish Religious Books."

ವಿನ್ಯಾಸ : ಎಮ್. ಮುರಲೀಧರ ಹೆಗ್ಡೆ

ಮುದ್ರಣ : ಪ್ರಭಾ ಪ್ರಿಂಟಿಂಗ್ ಹೌಸ್
22/ಎ, ಡಾ|| ಡಿ. ವಿ. ಗುಂಡಪ್ಪ ರಸ್ತೆ
ಬಸವನಗುಡಿ, ಬೆಂಗಳೂರು–560 004

# ಮುನ್ನುಡಿ

ಶ್ರೀ ರಮಣರು ದೇಹದಿಂದ ಕೂಡಿದ್ದ ಕಾಲ ಅಸದೃಶವಾಗಿತ್ತು. ಅವರು ತಮ್ಮನ್ನು ಹುಡುಕಿಕೊಂಡು ಬಂದ ಪ್ರತಿಯೊಬ್ಬರಿಗೂ ಕಾಲ, ದೇಶ, ಪಾತ್ರಾಪಾತ್ರತೆ ಮೊದಲಾದುವುಗಳನ್ನು ಪರಿಗಣಿಸದೆ ಸುಲಭಸಾಧ್ಯವಾಗಿ ಅವಕಾಶವನ್ನು ನೀಡಲು ಆಗ್ರಹಪಡಿಸುತ್ತಿದ್ದ ಅಸಾಮಾನ್ಯ ಸದ್ಗುರುಗಳು. ಅವರ ದೇಹ ಸಾರ್ವಜನಿಕ ಆಸ್ತಿಯಂತೆ, ಹಾಗೂ ಅವರ ಉಪದೇಶ ಆತ್ಮಸಾಕ್ಷಾತ್ಕಾರಕ್ಕೆ ನೇರವಾದ ಮಾರ್ಗವನ್ನು ತೋರಿಸುವ ಒಂದು ತೆರೆದ ಪುಸ್ತಕದಂತೆ. ಅವರ ಸಾನ್ನಿಧ್ಯವನ್ನು ಬಯಸಿ ಸಂದರ್ಶಕರು, ಭಕ್ತರು ಮತ್ತು ಸತ್ಯಾನ್ವೇಷಿಗಳಾದ ಜಿಜ್ಞಾಸುಗಳು ಹಗಲು ಮತ್ತು ರಾತ್ರಿಯನ್ನು ಪರಿಗಣಿಸದೆ ನಿರಂತರವಾಗಿ ಬರುತ್ತಿದ್ದರು. ಅವರೆಲ್ಲರೂ ಶ್ರೀ ರಮಣರು ಆಸೀನರಾಗಿರುತ್ತಿದ್ದ ಸಭಾಂಗಣದೊಳಗೆ ಅಡಿಯಿಟ್ಟ ಕೂಡಲೇ 'ರಮಣಲಹರಿ'ಯಲ್ಲಿ ತನ್ಮಯರಾಗಿಬಿಡುತ್ತಿದ್ದರು. ಅಲ್ಲಿನ ವಾತಾವರಣದ ಆನಂದಲಹರಿಯು ಅದೆಷ್ಟು ಪ್ರಭಾವ ಬೀರುತ್ತಿತ್ತೆಂದರೆ, ಆಧ್ಯಾತ್ಮ ಪಥದಲ್ಲಿ ಇನ್ನೂ ಅಂಬೆಗಾಲಿಡುತ್ತಿದ್ದವರೂ ಅದರಲ್ಲಿ ತಲ್ಲೀನರಾಗಿಬಿಡುತ್ತಿದ್ದರು. ಶ್ರೀ ರಮಣರು ಆದಿಗುರು ಶ್ರೀ ದಕ್ಷಿಣಾಮೂರ್ತಿಯಂತೆ ಮೌನವಾಗಿಯೇ ಉಪದೇಶಿಸಲು ಹೆಚ್ಚು ಒಲವನ್ನು ತೋರುತ್ತಿದ್ದರು. ಆದರೆ ಶ್ರದ್ಧಾವಂತರಾದ ಜಿಜ್ಞಾಸುಗಳು ತಮ್ಮ ಪ್ರಾಮಾಣಿಕವಾದ ಸಂಶಯಗಳನ್ನು ಅವರಿಗೆ ನಿವೇದಿಸಿಕೊಂಡ ಕೂಡಲೇ ಅವರ ಮನಸ್ಸಿನ ಪರಿಪಕ್ವತೆಗೆ ಅನುಗುಣವಾಗಿ ಸೂಕ್ತವಾದ ಉತ್ತರಗಳನ್ನು ನೀಡಿ ಅವರ ಸಂಶಯಗಳನ್ನು ನಿವೃತ್ತಿಮಾಡುತ್ತಿದ್ದರು. ಅವರ ಈ ಉಪದೇಶಗಳನ್ನು ಮುಂದಿನ ಪೀಳಿಗೆಯವರ ಉದ್ಧಾರಕ್ಕಾಗಿ ಕಾದಿರಿಸುವುದು ದಯಾಮಯನಾದ ಭಗವಂತನ ಉದ್ದೇಶವಾಗಿತ್ತು. ಇದರ ಸಲುವಾಗಿಯೇ ನಿಯಮಿತರಾದವರು ಶ್ರೀಮತಿ ನಾಗಮ್ಮ.

ನಾಗಮ್ಮ 1941 ರಲ್ಲಿ ಶ್ರೀ ರಮಣಾಶ್ರಮವನ್ನು ಸಂದರ್ಶಿಸಿದುದು ಅವರ ಅಣ್ಣ ಶ್ರೀ ಡಿ. ಎಸ್. ಶಾಸ್ತ್ರಿ ರಮಣರನ್ನು 'ಜೀವನ್ಮುಕ್ತ'ರೆಂದು ಬಣ್ಣಿಸಿದ್ದರಿಂದ. ನಾಗಮ್ಮ ರಮಣರ ಸನ್ನಿಧಿಯಲ್ಲಿ ಅಡಿಯಿಟ್ಟೊಡನೆ

ರಮಣರ ಉನ್ನತ ಸ್ಥಿತಿಯನ್ನು ಗುರುತಿಸಿ ಅವರಿಗೆ ಕೂಡಲೇ ಶರಣಾಗತ ರಾದರು. ಅವರು ತಮ್ಮ ಅಣ್ಣ ಮತ್ತು ಮಿತ್ರರ ಸಲಹೆಯ ಮೇರೆಗೆ ಹಾಗೂ ತಮ್ಮ ಸ್ಪಷ್ಟ ಅರಿವಿಗಾಗಿ ರಮಣರ ಸನ್ನಿಧಿಯಲ್ಲಿ ಪ್ರತಿನಿತ್ಯ ನಡೆಯುತ್ತಿದ್ದ ಘಟನೆ ಮತ್ತು ಸಂವಾದಗಳನ್ನು ಬರೆವಣಿಗೆಯಲ್ಲಿ ಸಂಗ್ರಹಿಸಲು ಮೊದಲು-ಮಾಡಿದರು. ಅವುಗಳನ್ನು ಅವರು ಅದೇ ದಿನ ರಾತ್ರಿ—ಅದು ಎಷ್ಟೇ ಹೊತ್ತಾದರೂ ಸರಿ, ಬರೆದಿಟ್ಟು, ಬೆಳಗಾದ ನಂತರ ಅದನ್ನು ರಮಣರಿಗೆ ತೋರಿಸಿ ಅವರ ಅನುಮೋದನೆಯನ್ನು ಪಡೆದುಕೊಳ್ಳುತ್ತಿದ್ದರು. ಅವರ ಈ ಪ್ರಯತ್ನಕ್ಕೆ ರಮಣರ ಅನುಮತಿ ಮತ್ತು ಅನುಗ್ರಹ ದೊರಕಿದ ಸ್ಪಷ್ಟ ಸೂಚನೆಗಳಿದ್ದುವು. ಅಪ್ರಯತ್ನವಾಗಿ ಪದಪುಂಜಗಳು ತಾವಿರಬೇಕಾದ ಸ್ಥಳಗಳಲ್ಲೇ ಕುಳಿತುಕೊಳ್ಳುತ್ತಿದ್ದುವು. ಜೊತೆಗಾರ ಭಕ್ತರು ಈ ಕೆಲಸದ ಮಹತ್ವವನ್ನು ಒತ್ತಿ ಹೇಳುತ್ತ ಅವರಿಗೆ ಪ್ರೋತ್ಸಾಹ ನೀಡುತ್ತಿದ್ದರು. ಈ ವಿಷಯಗಳನ್ನು ಅವರು ತಮ್ಮ ಅಣ್ಣ ಶಾಸ್ತ್ರಿಯವರಿಗೆ ಪತ್ರರೂಪದಲ್ಲಿ ಪ್ರತಿನಿತ್ಯವೂ ದಾಖಲುಮಾಡುತ್ತಿದ್ದುದನ್ನು ಪ್ರಕಾಶಕರು ಪುಸ್ತಕರೂಪದಲ್ಲಿ ಪ್ರಕಟಿಸಲು ಉತ್ಸಾಹಭರಿತರಾಗಿದ್ದರು. ಈ ಪುಸ್ತಕ 'ಶ್ರೀ ರಮಣಾಶ್ರಮ ಲೇಖಲು' ಎಂಬ ಹೆಸರಿನಲ್ಲಿ ತೆಲುಗಿನಲ್ಲಿ ಪ್ರಕಟವಾದೊಡನೆ ಪ್ರಸಿದ್ಧಿ ಪಡೆಯಿತು. ಇದಕ್ಕೆ ಕಾರಣವು ಸುಸ್ಪಷ್ಟ. ಆ ಪತ್ರಗಳು ಹೃದಯಾಂತರಾಳದಿಂದ ಭಕ್ತಿಪೂರಿತವಾಗಿ ಹೊರಹೊಮ್ಮಿದ್ದು, ಅದನ್ನು ಓದುವವರಿಗೆ ತಾವು ರಮಣಾಶ್ರಮದ ಸಭಾಂಗಣದಲ್ಲಿ ಭಗವಾನ್ ಶ್ರೀ ರಮಣಮಹರ್ಷಿಗಳ ಸನ್ನಿಧಿಯಲ್ಲೇ ಕುಳಿತು, ಆ ಘಟನೆಗಳನ್ನು ತಾವೇ ಕಣ್ಣಾರೆ ಕಂಡು, ಆ ಸಂವಾದಗಳನ್ನು ಕಿವಿಯಾರ ಕೇಳಿದಂತೆ ಅನುಭವಗಳಾಗುತ್ತಿದ್ದುವು. ಈ ರೀತಿಯಾಗಿ ಜಗತ್ತಿಗೆ ಲಭ್ಯವಾದ ರಮಣರ ಸಮಕಾಲೀನದ ಯಥಾರ್ಥವಾದ ದಾಖಲೆಗಳಿಗೆ ನಾವು ನಾಗಮ್ಮನಿಗೆ ಚಿರಋಣಿಗಳಾಗಿರಬೇಕು.

ಡಾ|| ಕೆ. ಎ. ನಾರಾಯಣನ್ ಈ ಕೃತಿಯನ್ನು ತೆಲುಗು ಮೂಲದಿಂದ ಕನ್ನಡಕ್ಕೆ ಪರಿವರ್ತಿಸುವಾಗ ಈ ಕೆಲಸವು ರಮಣರಿಂದ ತಮಗೆ ಆದೇಶಿಸಲ್ಪಟ್ಟ ಪವಿತ್ರಕರ್ತವ್ಯವೆಂದು ಪರಿಗಣಿಸಿದ್ದಾರೆ. ಇದನ್ನು ನಾವು ಈ ಪುಸ್ತಕದ ಪ್ರತಿಯೊಂದು ಪುಟದಲ್ಲೂ ಕಾಣಬಹುದು. ಅವರು ಕನ್ನಡ

ನಾಡಿನ ವಾಚಕ ವೃಂದಕ್ಕೆ ತೆರೆದಿಟ್ಟಿರುವ ಈ ನೂತನ ಸುಂದರ ದೃಶ್ಯಗಳಿಗೆ ನಮ್ಮ ಕೇಂದ್ರ ಅವರನ್ನು ಮನಸಾರೆ ಅಭಿನಂದಿಸುತ್ತದೆ.

ರಮಣರ ಸನ್ನಿಧಿಯಲ್ಲಿ ನಡೆದ ಘಟನೆಗಳ ವಿವರಣೆ ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿರುವ ರಮಣಾಶ್ರಮದ ಪತ್ರಗಳ ಈ ಮೂರನೆಯ ಭಾಗ ವನ್ನೂ, ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸುವುದಕ್ಕೆ ಅನುಮತಿಯನ್ನಿತ್ತ ಶ್ರೀ ರಮಣಾಶ್ರಮದ ಬೋರ್ಡ್ ಆಫ್ ಟ್ರಸ್ಟೀಸ್ ಅಧ್ಯಕ್ಷರಾದ ಶ್ರೀ ಟಿ. ಎನ್. ವೆಂಕಟರಾಮನ್ ಅವರಿಗೆ ನಮ್ಮ ಕೃತಜ್ಞತಾಪೂರ್ವಕ ಧನ್ಯ ವಾದಗಳು.

ಈ ಪುಸ್ತಕದ ಮನಮೋಹಕ ರಕ್ಷಾಕವಚದ ವಿನ್ಯಾಸವು ಸ್ಮಾರ್ಟ್ ವರ್ಕ್ಸ್‌ನ ಶ್ರೀ ಮುರಳೀಧರ ಹೆಗ್ಗಡೆಯವರದು. ಮುದ್ರಣದ ನುರಿತ ಕಾರ್ಯದಲ್ಲಿ ಪ್ರಭಾ ಮುದ್ರಣಾಲಯದ ಶ್ರೀ ಕೃಷ್ಣಾಚಾರ್ ಮತ್ತು ಅವರ ಪುತ್ರ ಶ್ರೀ ವಾಸುದೇವ್ ಪರಿಣತರು. ಇವರೆಲ್ಲರಿಗೂ ಅವರ ಅತಿ ಶ್ರೇಷ್ಠ ಸೇವೆಗಳಿಗಾಗಿ ಕೇಂದ್ರದ ಧನ್ಯವಾದಗಳು.

ಈ ಪುಸ್ತಕದ ಪ್ರಕಟಣೆಗೆ ಧನಸಹಾಯವನ್ನಿತ್ತು ಪ್ರೋತ್ಸಾಹಿಸಿದ ತಿರುಪತಿ-ತಿರುಮಲ ದೇವಸ್ಥಾನದ ಆಡಳಿತವರ್ಗಕ್ಕೆ ಕೇಂದ್ರವು ಕೃತಜ್ಞತೆ ಗಳನ್ನು ಸಮರ್ಪಿಸುತ್ತದೆ.

ರಮಣ ಮಹರ್ಷಿ ಸೆಂಟರ್ ಫಾರ್ ಲರ್ನಿಂಗ್
ಬೆಂಗಳೂರು
15–7–1991

**ಎ. ಆರ್. ನಟರಾಜನ್**
ಅಧ್ಯಕ್ಷರು

# ಕೃತಜ್ಞತೆ

'ರಮಣ ಸನ್ನಿಧಿಯಲ್ಲಿ' ಎಂಬ ಹೆಸರಿನಲ್ಲಿ ಈಗ ಪ್ರಕಟವಾಗುತ್ತಿರುವ ಈ ಕೃತಿಯ ಮೂಲ ಶ್ರೀಮತಿ ಸೂರಿ ನಾಗಮ್ಮನವರ ತೆಲುಗು 'ಶ್ರೀ ರಮಣಾಶ್ರಮ ಲೇಖಲು'ವಿನ ಮೂರನೆಯ ಭಾಗ. ಈ ಪತ್ರಮಾಲೆಯು 30-9-47 ರಿಂದ 23-4-48ರ ವರೆಗಿನ 44 ಪತ್ರಗಳನ್ನೊಳಗೊಂಡಿದೆ. ಈ ಪತ್ರಮಾಲೆಯನ್ನು ಮೂಲಕೃತಿಯಂತೆ ಐದು ಭಾಗಗಳಾಗಿ ಪ್ರಕಟಿಸಲು ಉದ್ದೇಶಿಸಿರುವ ಕಾರಣಗಳು ಹಲವಾರು. ಈ ಮಾಲೆಯ ಪ್ರತಿಯೊಂದು ಪತ್ರವೂ ಸ್ವತಂತ್ರವಾಗಿದ್ದು ಅದರಲ್ಲಿ ಭಗವಾನರ ಸನ್ನಿಧಿಯಲ್ಲಿ ಪ್ರತಿ ದಿನ ನಡೆದ ಘಟನೆಗಳನ್ನೂ ಮತ್ತು ಸಂದರ್ಶಕರ ಪ್ರಶ್ನೆಗಳಿಗೆ ಭಗವಾನರು ನೀಡಿದ ಉತ್ತರಗಳನ್ನೂ ಪತ್ರರೂಪದಲ್ಲಿ ಒಳಗೊಂಡು ಅದನ್ನು ಇತರ ಪತ್ರಗಳ ಸಹಾಯವಿಲ್ಲದೆ ಓದಬಹುದು ಎಂಬುದು ಮುಖ್ಯ ಕಾರಣ. ಪ್ರತಿಯೊಂದು ಭಾಗವೂ ಚಿಕ್ಕದಾಗಿದ್ದು ಸಾಮಾನ್ಯ ಜನರು ಕೊಂಡು ಓದಲು ಸುಲಭವಾಗಿರುತ್ತದೆಂಬುದು ಇನ್ನೊಂದು ಕಾರಣ. ಕೇವಲ ಮುದ್ರಣದ ಅನುಕೂಲಕ್ಕಾಗಿ ಹೀಗೆ ಭಾಗಗಳಾಗಿ ಪ್ರಕಟಿಸಿರುವುದರಿಂದ ಇತರ ಭಾಗಗಳನ್ನು ಆಶ್ರಯಿಸದೇ ಈ ಭಾಗವನ್ನು ಓದಲು ಯಾವ ಅಡ್ಡಿಯೂ ಇಲ್ಲ. ಇದರ ಅನುವಾದ ಕಾರ್ಯಕ್ಕೆ ಎಲ್ಲ ರೀತಿಯ ಪ್ರೋತ್ಸಾಹ ಮತ್ತು ಸಹಕಾರಗಳನ್ನು ನೀಡಿದ ರಮಣ ಮಹರ್ಷಿ ಸೆಂಟರ್ ಫಾರ್ ಲರ್ನಿಂಗ್‌ನ ಅಧ್ಯಕ್ಷರಾದ ಶ್ರೀ ಎ. ಆರ್. ನಟರಾಜನ್ ಅವರಿಗೆ ನಾನು ಚಿರಋಣಿ. ರಮಣಾಶ್ರಮದ ಪತ್ರಗಳ ಮೊದಲನೆ ಮತ್ತು ಎರಡನೆ ಭಾಗಗಳನ್ನು ಓದಿದ ವಾಚಕರು ಹಾಗೂ ಇವುಗಳ ವಿಮರ್ಶಕರು ನೀಡಿದ ಸಲಹೆಯಂತೆ ಈ ಪುಸ್ತಕದಲ್ಲಿ ಮಹರ್ಷಿಗಳ ಮತ್ತು ನಾಗಮ್ಮನವರ ಸಂಕ್ಷಿಪ್ತ ಜೀವನವನ್ನು ಕೊಟ್ಟಿದೆ. ಕನ್ನಡ ವಾಚಕವೃಂದ ಮೂರನೆಯ ಭಾಗದ ಈ ಅನುವಾದವನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ. ಈ ಕೆಲಸದಲ್ಲಿ ನೆರವಾದ ಎಲ್ಲರಿಗೂ ನನ್ನ ಕೃತಜ್ಞತೆಗಳು.

ಭಗವಾನ್ ಶ್ರೀ ರಮಣ ಮಹರ್ಷಿಗಳ ಕೃಪೆ ಎಂಬ ಗಾಳಿ ಬೀಸುತ್ತಲೇ ಇದೆ. ಅದನ್ನು ಅರಿಯುವ ಶಕ್ತಿಯನ್ನೂ ಅವರು ನಮಗೆ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
15-7-1991

ಕೆ. ಎ. ನಾರಾಯಣನ್

# ವಿಷಯ ಸೂಚಿ

# ಭಗವಾನ್ ಶ್ರೀ ರಮಣ ಮಹರ್ಷಿಗಳ ಸಂಕ್ಷಿಪ್ತ ಜೀವನ ಚರಿತ್ರೆ

ಭಗವಾನ್ ಶ್ರೀ ರಮಣ ಮಹರ್ಷಿಗಳು ತಮಿಳುನಾಡಿನ ತಿರುಚ್ಚುಳಿ ಎಂಬ ಪುರಾಣಪ್ರಸಿದ್ಧವಾದ ಸಣ್ಣ ಹಳ್ಳಿಯೊಂದರಲ್ಲಿ 30–12–1879ರಂದು ಜನಿಸಿದರು. ಆರ್ದ್ರಾದರ್ಶನದ ಪುಣ್ಯದಿನವೆಂದು ಪ್ರಸಿದ್ಧವಾದ ಈ ದಿನ ದಂದೇ ಈಶ್ವರನು ಹಿಂದೆ ನಟರಾಜನ ರೂಪದಲ್ಲಿ ಗೌತಮ, ಪತಂಜಲಿ ಮತ್ತು ವ್ಯಾಘ್ರಪಾದರೇ ಮೊದಲಾದ ಮುನಿಪುಂಗವರುಗಳಿಗೆ ದರ್ಶನವನ್ನಿತ್ತು ಅನುಗ್ರಹಿಸಿದನೆಂದು ಪ್ರತೀತಿ. ಇವರ ಬಾಲ್ಯದ ಹೆಸರು ವೆಂಕಟರಾಮನ್, ತಂದೆ ಸುಂದರಂ ಅಯ್ಯರ್ ಮತ್ತು ತಾಯಿ ಅಳಗಮ್ಮಾಳ್. ಈ ದಂಪತಿ ಗಳಿಗೆ ಇವರು ಎರಡನೆಯ ಮಗ. ಇವರ ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸ ತಿರುಚ್ಚುಳಿಯಲ್ಲಿಯೂ ನಂತರ ಒಂದು ವರ್ಷದ ವಿದ್ಯಾಭ್ಯಾಸ ಹತ್ತಿರವಿದ್ದ ದಿಂಡುಗಲಿನಲ್ಲಿಯೂ ನಡೆಯಿತು. ಹನ್ನೆರಡನೆಯ ವರ್ಷದಲ್ಲಿ ಇವರ ತಂದೆಯು ತೀರಿಕೊಂಡರು. ಆದುದರಿಂದ ಇವರು ಮಧುರೆಯಲ್ಲಿದ್ದ ತಮ್ಮ ಚಿಕ್ಕಪ್ಪ ನವರ ಬಳಿಯಿದ್ದು ಸ್ಕಾಟ್ಸ್ ಮಿಡ್ಲ್ ಸ್ಕೂಲಿನಲ್ಲೂ ನಂತರ ಅಮೆರಿಕನ್ ಮಿಷನ್ ಹೈಸ್ಕೂಲಿನಲ್ಲೂ ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ವ್ಯಾಸಂಗದಲ್ಲಿ ಅವರಿಗೆ ಅಷ್ಟಾಗಿ ಆಸಕ್ತಿಯಿದ್ದಂತೆ ಕಂಡುಬರುತ್ತಿರಲಿಲ್ಲ; ಆದರೆ ಇವರು ದೃಢಕಾಯರಾಗೂ ಆರೋಗ್ಯವಾಗೂ ಇದ್ದುದರಿಂದ ಆಟಪಾಟ ಗಳಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದರು.

ಶ್ರೀ ರಮಣ ಮಹರ್ಷಿಗಳು ತಮ್ಮ ಹದಿನಾರನೆಯ ವರ್ಷದಲ್ಲಿ ತೀರ್ಥ ಯಾತ್ರೆಯಿಂದ ಹಿಂದಿರುಗಿ ಬಂದ ತಮ್ಮ ನೆಂಟರೊಬ್ಬರಿಂದ ಅಕಸ್ಮಾತ್ತಾಗಿ 'ಅರುಣಾಚಲ' ಎಂಬ ಹೆಸರನ್ನು ಕೇಳಿದ ಕೂಡಲೇ ಪುಳಕಿತರಾದರು. ಅದು ಹತ್ತಿರದ ತಿರುವಣ್ಣಾಮಲೆಯೆಂದು ಅವರಿಂದ ಅರಿತಾಗಲಂತೂ ಅವರಿಗೆ ಬಹಳ ಅಚ್ಚರಿಯೂ ಮತ್ತು ಸಂತೋಷವೂ ಉಂಟಾಯಿತು. ಇದಾದ ಕೆಲವು ಕಾಲದ ನಂತರ ಅವರಿಗೆ ಪೆರಿಯ ಪುರಾಣಂ ಎಂಬ ಅರುವತ್ತುಮೂರು ಶೈವಸಂತರ ಜೀವನ ಚರಿತ್ರೆಯನ್ನೊಳಗೊಂಡ ತಮಿಳು ಪುಸ್ತಕವು ಓದಲು ಸಿಕ್ಕಿತು. ಈ ಪುಸ್ತಕವು ಅವರಲ್ಲಿ ಅಚ್ಚಳಿಯದ ಮಹತ್ವವಾದ ಪರಿಣಾಮ ವನ್ನುಂಟುಮಾಡಿ ಆ ಭಕ್ತರುಗಳಂತೆಯೇ ತಾವೂ ಸಹ ತಮ್ಮ ಜೀವನದ ಗುರಿಯನ್ನು ಹೊಂದಬೇಕೆಂಬ ಉತ್ಕಟವಾದ ಇಚ್ಛೆ ಉಂಟಾಯಿತು.

ಇದ್ದಕ್ಕಿದ್ದಂತೆ ಅವರಿಗೆ ಸಾವಿನ ಹೆದರಿಕೆ ಉಂಟಾಯಿತು. ಈ ಹೆದರಿಕೆ ಅಂದು ಅವರಿಗೆ ಉಂಟಾಗಲು ವಿಶೇಷವಾದ ಯಾವ ಕಾರಣವೂ ಇರಲಿಲ್ಲ. ಆದರೆ ಇದರಿಂದ ಅವರು ಗಾಬರಿಯಾಗಲಿಲ್ಲ; ಬದಲಾಗಿ ತಮ್ಮಲ್ಲೇ ಈ ಸಾವಿನ ಬಗೆಗೆ ಶಾಂತವಾಗಿ ವಿಚಾರಿಸಲು ಮೊದಲು ಮಾಡಿದರು. ಅವರ ವಿಚಾರ ಸರಣಿಯನ್ನು ಅವರೇ ಈ ಕೆಳಗಿನ ಮಾತುಗಳಲ್ಲಿ ವಿವರಿಸಿದ್ದಾರೆ :

"ಸಾವಿನ ಭೀತಿ ನನ್ನ ಮನಸ್ಸನ್ನು ಅಂತರ್ಮುಖಿಯನ್ನಾಗಿ ಮಾಡಿತು. ಆಗ ನಾನು ಮನಸ್ಸಿನಲ್ಲೇ ಹೀಗೆ ಪ್ರಶ್ನಿಸಿಕೊಂಡೆ: 'ಈಗ ಸಾವು ಬಂದಿದೆ, ಸರಿ. ಆದರೆ ನಿಜವಾಗಿ ಸಾವು ಎಂದರೇನು? ಸಾಯುತ್ತಿರುವುದು ಯಾವುದು?' ಆಗ ಈ ದೇಹ ಸಾಯುತ್ತಿದೆ ಎಂಬ ಭಾವನೆ ನನ್ನಲ್ಲಿ ಉದಯಿಸಿತು. ಕೂಡಲೇ ನಾನು ನನ್ನ ಕೈಕಾಲುಗಳನ್ನು ನೆಟ್ಟಗೆ ನೀಡಿ ಬಾಯಿಯನ್ನು ಭದ್ರವಾಗಿ ಮುಚ್ಚಿಕೊಂಡು ಶ್ವಾಸವನ್ನೂ ನಿರೋಧಿಸಿ ಶವದಂತೆಯೇ ಚಲಿಸದೆ ಮಲಗಿಕೊಂಡು ಮತ್ತೆ ನನ್ನ ವಿಚಾರ ಸರಣಿಯನ್ನು ಹೀಗೆ ಮುಂದುವರಿಸಿದೆ : 'ಸರಿ, ಈ ದೇಹ ಈಗ ಸತ್ತುಬಿದ್ದಿದೆ. ಇದನ್ನೀಗ ಸ್ಮಶಾನಕ್ಕೆ ಕೊಂಡೊಯ್ದು ಸುಟ್ಟು ಬೂದಿಮಾಡಿಬಿಡುತ್ತಾರೆ. ಆದರೆ ದೇಹದ ಈ ನಾಶದಿಂದ 'ನಾನು' ಎಂಬುವನು ನಿಜವಾಗಿ ನಾಶಹೊಂದಿದಂತೆ ಆಯಿತೇನು? ಹಾಗಾದರೆ ನಾನು ಈ ದೇಹವೇನು? ಇಲ್ಲ, ಏಕೆಂದರೆ ಈ ದೇಹವಾದರೋ ಚಲಿಸದ, ಮಾತಾಡದ ಜಡವಸ್ತುವಾಗಿ ಈಗ ಇಲ್ಲಿ ಬಿದ್ದುಕೊಂಡಿದೆ. ಆದರೆ ನನ್ನ ವ್ಯಕ್ತಿತ್ವದ ಸಂಪೂರ್ಣವಾದ ಅಸ್ತಿತ್ವವನ್ನೂ ಮತ್ತು ಈ ದೇಹಕ್ಕಿಂತ ಭಿನ್ನವಾಗಿ 'ನಾನು ನಾನು' ಎಂಬ ಅರಿವು ಸ್ಪಂದಿಸುತ್ತಿರುವುದನ್ನೂ ನಾನು ನನ್ನ ಅಂತರಾಳದಲ್ಲಿ ಸ್ಪಷ್ಟವಾಗಿ ಅನುಭವಿಸುತ್ತಿರುವೆನಲ್ಲಾ! ಹಾಗಾಗಿ ಈ ದೇಹವು ನಾಶವಾದರೂ ಇದನ್ನು ಮೀರಿದ ಈ ಚೈತನ್ಯದ ಬಳಿ ಸಾವೆಂಬುದು ಸುಳಿಯಲೇ ಆರದು. ಆದಕಾರಣ ನಾನು ಎಂದಿಗೂ ನಾಶವಿಲ್ಲದ ಸಚ್ಚಿದಾನಂದಸ್ವರೂಪನಾದ ಆತ್ಮನೇ ಆಗಿದ್ದೇನೆ."

ಅನುಭವಕ್ಕೆ ಗೋಚರವಾಯಿತೆಂದೂ ಆ ಅನುಭವಕ್ಕೆ ಇದನ್ನು ಈಗ ತಿಳಿಸಿ ಹೇಳುವಷ್ಟು ಸಮಯವೂ ಹಿಡಿಯಲಿಲ್ಲವೆಂದೂ, ಅಂದಿನಿಂದ ನಾನಾ ಬಗೆಯ ರಾಗಗಳಿಗೆ ಆಧಾರವಾಗಿ ಸ್ಪಂದಿಸುವ ಶ್ರುತಿಯ ನಿನಾದದಂತೆ ಈ 'ಅಹಂಸ್ಫುರಣೆಯು' ತಮ್ಮನ್ನು ಎಡೆಬಿಡದೆ ತಮ್ಮೆಲ್ಲ ಕೆಲಸಕಾರ್ಯಗಳಲ್ಲೂ ಹಾಸುಹೊಕ್ಕಾಗಿ ವ್ಯಾಪಿಸಿಕೊಂಡಿರುತ್ತದೆಂದೂ ತಮ್ಮ ಈ ಸಹಜಸ್ಥಿತಿಯನ್ನು ಕುರಿತು ಬಣ್ಣಿಸಿದ್ದಾರೆ.

ಈ ಘಟನೆಯ ನಂತರ ಅವರ ಜೀವನದಲ್ಲಿ ವಿಶೇಷವಾದ ಪರಿವರ್ತನೆಯು ಕಂಡುಬಂದಿತು. ಹಿಂದಿನ ಮೌಲ್ಯಗಳು ಬದಲಾಗಿ ಇದುವರೆಗೂ ಸುಪ್ತವಾಗಿದ್ದ ಆಧ್ಯಾತ್ಮಿಕ ಮೌಲ್ಯಗಳು ಅವುಗಳ ಸ್ಥಾನವನ್ನು ಆಕ್ರಮಿಸಿದುವು. ಆಟಪಾಟಗಳು, ಸ್ನೇಹಿತರು, ಓದುಬರಹ ಇವುಗಳಲ್ಲಿ ಆಸಕ್ತಿಯಿಲ್ಲವಾಯಿತು; ಬದಲಾಗಿ ಧ್ಯಾನ ಮತ್ತು ಮೌನದಲ್ಲಿ ಹೆಚ್ಚಿನ ಆಸಕ್ತಿ ಉಂಟಾಯಿತು. ಪ್ರತಿನಿತ್ಯವೂ ಮನೆಯ ಬಳಿಯಿದ್ದ ಮೀನಾಕ್ಷಿ ದೇವಾಲಯಕ್ಕೆ ಹೋಗಿ ಅಲ್ಲಿದ್ದ ದೇವತಾವಿಗ್ರಹಗಳೆದುರು ತಾಸುಗಟ್ಟಲೆ ಕಣ್ಣೀರುಗರೆಯುತ್ತ ನಿಲ್ಲುವರು. ಅವರ ನಡೆನುಡಿಗಳಲ್ಲಿ ವಿನಯ, ಅನುಕಂಪ, ಮೃದುಸ್ವಭಾವ ಮೊದಲಾದ ಸಾತ್ವಿಕ ಗುಣಗಳು ಎದ್ದು ಕಾಣುತ್ತಿದ್ದುವು.

ಅವರ ಅಣ್ಣ ನಾಗಸ್ವಾಮಿಯು ತಮ್ಮನ ಈ ಪರಿವರ್ತನೆಯನ್ನು ಗಮನಿಸುತ್ತಲೇ ಇದ್ದು ವಿದ್ಯಾಭ್ಯಾಸದಲ್ಲಿ ಇವರಿಗಿದ್ದ ಅನಾದರವನ್ನು ಕುರಿತು ಅನೇಕ ಬಾರಿ ಎಚ್ಚರಿಸುತ್ತಲೂ ಇದ್ದನು. ಪರಿಸ್ಥಿತಿ ಹೀಗೆಯೇ ಮುಂದುವರೆದು ಮೇಲೆ ತಿಳಿಸಿದ ಅನುಭವವಾದ ಆರು ವಾರಗಳ ನಂತರ ಒಂದು ನಿರ್ಣಾಯಕ ಘಟ್ಟವನ್ನು ತಲುಪಿತು. ಓದಿನಲ್ಲಿ ಅವರಿಗೆ ಉಂಟಾಗಿದ್ದ ಅನಾಸಕ್ತಿಯ ಫಲವಾಗಿ ಒಂದು ದಿನ ಶಾಲೆಯಲ್ಲಿ ಆಂಗ್ಲಭಾಷೆಯ ವ್ಯಾಕರಣದ ಕೆಲವು ಪುಟಗಳನ್ನು ಅನೇಕ ಬಾರಿ ಬರೆದುಕೊಂಡು ಬರುವ ಶಿಕ್ಷೆಯನ್ನು ವಿಧಿಸಿದ್ದರು. ಅದನ್ನು ಬರೆಯುತ್ತ ಅವರು ಅಂದು ಮನೆಯಲ್ಲಿ

*

ಕುಳಿತಿದ್ದರು. ಆಗ ಯಾವುದಕ್ಕೂ ಉಪಯೋಗವಿಲ್ಲದ ಈ ಕೆಲಸದ ಬಗ್ಗೆ ಅವರಿಗೆ ಅತ್ಯಂತ ಜಿಗುಪ್ಸೆ ಉಂಟಾಗಿ ತಾವು ಬರೆಯುತ್ತಿದ್ದ ಪುಸ್ತಕವನ್ನು ಒಂದು ಬದಿಗೊತ್ತಿ ಪದ್ಮಾಸನಸ್ಥರಾಗಿ ಧ್ಯಾನದಲ್ಲಿ ತಲ್ಲೀನರಾಗಿ ಕುಳಿತು ಬಿಟ್ಟರು. ಇದನ್ನು ನೋಡಿದ ಅವರ ಅಣ್ಣ ನಾಗಸಾಮಿಯು ಅವರನ್ನು "ಇಂತಹವನಿಗೆ ಇಲ್ಲೇನು ಕೆಲಸ" ಎಂದು ಮೂದಲಿಸಿದನು. ಈ ಮಾತು ಅವರ ಮನಸ್ಸಿಗೆ ನಾಟಿ ಅವರಿಗೂ ಸಹ ಇದು ವಾಸ್ತವವೆಂದೇ ತೋರಿ ಅಂದೇ ಮನೆಯನ್ನು ತ್ಯಜಿಸಿ ಹೊರಟುಹೋಗಲು ತೀರ್ಮಾನಿಸಿದರು. ಆಗ ಅವರಿಗೆ ಥಟ್ಟನೆ ಅರುಣಾಚಲದ ನೆನಪು ಬಂದು ಈ ಘಟನೆಯು ತಮ್ಮನ್ನು ಅಲ್ಲಿಗೆ ಕರೆಸಿಕೊಳ್ಳಲು ಶ್ರೀ ಅರುಣಾಚಲೇಶ್ವರನು ಹೂಡಿದ ಒಂದು ತಂತ್ರ ವೆಂದೇ ಭಾಸವಾಯಿತು. ಆಗ ಅವರು ಅಣ್ಣನಿಗೆ ಅಂದು ತಮಗೆ ಶಾಲೆಯಲ್ಲಿ ಒಂದು ವಿಶೇಷ ತರಗತಿ ಇದೆಯೆಂದೂ ಅದಕ್ಕಾಗಿ ಶಾಲೆಗೆ ಹೋಗುತ್ತಿದ್ದೇ ನೆಂದೂ ತಿಳಿಸಿ ಮನೆಯಿಂದ ಹೊರಟುನಿಂತಾಗ ಅಣ್ಣನು ಅವರಿಗೆ ಅಲ್ಲೇ ಪೆಟ್ಟಿಗೆಯಲ್ಲಿ ಐದು ರೂಪಾಯಿಗಳಿವೆಯೆಂದೂ ಅದನ್ನು ತೆಗೆದುಕೊಂಡು ಹೋಗಿ ದಾರಿಯಲ್ಲಿದ್ದ ತನ್ನ ಕಾಲೇಜಿನ ಶುಲ್ಕವನ್ನು ಕಟ್ಟಬೇಕೆಂದೂ ತಿಳಿಸಿ ದನು. ಆಗ ಶ್ರೀ ರಮಣರು ಮನೆಯಲ್ಲಿದ್ದ ಹಳೆಯ ಭೂಪಟವೊಂದನ್ನು ತೆರೆದುನೋಡಿ ತಿರುವಣ್ಣಾಮಲೆಯನ್ನು ತಲುಪಲು ಸುಮಾರು ಮೂರು ರೂಪಾಯಿಗಳು ಸಾಕಾಗಬಹುದೆಂದು ಅಂದಾಜುಮಾಡಿ ಪೆಟ್ಟಿಗೆಯಿಂದ ಅಷ್ಟುಮಾತ್ರವೇ ಹಣವನ್ನು ತೆಗೆದುಕೊಂಡು ಅಣ್ಣನಿಗೆ ಹೀಗೆ ಪತ್ರ ವೊಂದನ್ನು ಬರೆದಿಟ್ಟು ಮನೆಯನ್ನು ಬಿಟ್ಟು ಹೊಟುಹೋದರು.

"ನಾನು ನನ್ನ ತಂದೆಯನ್ನು ಹುಡುಕಿಕೊಂಡು ಅವನ ಆದೇಶದಂತೆ ಇಲ್ಲಿಂದ ಹೊರಟಿದ್ದೇನೆ. ಇದು ಒಳ್ಳೆಯ ಕೆಲಸದಲ್ಲಿ ತೊಡಗಿರುವುದಾಗಿದೆ. ಆದುದರಿಂದ ಇದರ ಬಗ್ಗೆ ಯಾರೂ ಚಿಂತಿಸಬೇಕಾದ್ದಿಲ್ಲ. ಇದನ್ನು ಹುಡುಕು ವುದಕ್ಕಾಗಿ ಹಣವನ್ನೂ ವೃಥಾ ಖರ್ಚು ಮಾಡಬೇಕಾಗಿಲ್ಲ.

ವಿ.ಸೂ: ನಿನ್ನ ಕಾಲೇಜಿನ ಶುಲ್ಕವನ್ನು ಕಟ್ಟಿಲ್ಲ. ಎರಡು ರೂಪಾಯಿಗಳನ್ನು ಇಲ್ಲೇ ಬಿಟ್ಟಿರುತ್ತೇನೆ."

ಹೀಗೆ 29ನೆಯ ಆಗಸ್ಟ್ 1896 ಶನಿವಾರ ಮಧ್ಯಾಹ್ನದಂದು ಮನೆ ಯನ್ನು ಬಿಟ್ಟು ಹೊರಟ ಶ್ರೀ ರಮಣರು ತಿರುವಣ್ಣಾಮಲೆಯನ್ನು ತಲುಪಿದ್ದು

ಅರುಣಾಚಲೇಶ್ವರನ ಇಚ್ಛೆ ಮತ್ತು ಅನುಗ್ರಹವೆಂದೇ ಮುಂದಿನ ಘಟನೆಗಳು ಸಾರುತ್ತವೆ. ಮನೆಯಿಂದ ಅರ್ಧಮೈಲು ದೂರವಿದ್ದ ರೈಲ್ವೇ ನಿಲ್ದಾಣಕ್ಕೆ ಅವರು ನಡೆದುಕೊಂಡು ಹೋದಾಗ ತಡವಾಯಿತು ; ಆದರೆ ಅಂದು ರೈಲೂ ಸಹ ತಡವಾಗಿ ಬಂತು—ಇಲ್ಲದಿದ್ದರೆ ಅಂದಿನ ಅವರ ಪ್ರಯಾಣ ತಪ್ಪಿಹೋಗುತ್ತಿತ್ತು. ಮನೆಯ ಭೂಪಟದಲ್ಲಿ ತಿರುವಣ್ಣಾಮಲೆಗೆ ಹತ್ತಿರದ ರೈಲು ನಿಲ್ದಾಣ ತಿಂಡಿವನಂ ಎಂದು ನೋಡಿದ್ದ ಕಾರಣ ಅವರು ತಿಂಡಿವನಂಗೇ ಟಿಕೆಟ್ಟನ್ನು ಕೊಂಡುಕೊಂಡರು. ಅದಕ್ಕೆ 2 ರೂ. 13 ಆಣೆ ಖರ್ಚಾಗಿ ಕೇವಲ ಮೂರಾಣೆಯು ಮಾತ್ರವೇ ಉಳಿಯಿತು. ತಿರುವಣ್ಣಾಮಲೆಯ ಮುಖಾಂತರವೇ ಹೊಸದಾಗಿ ರೈಲುಮಾರ್ಗವಾಗಿರುವುದನ್ನು ಅರಿತಿದ್ದ ಅವರು ಅಲ್ಲಿಗೇ ಟಿಕೆಟ್ಟನ್ನು ಕೊಂಡಿದ್ದರೆ ಅದಕ್ಕೆ ಸರಿಯಾಗಿ ಮೂರು ರೂಪಾಯಿಗಳೇ ಆಗುತ್ತಿತ್ತು. ಆದರೆ ಅದು ಅವರಿಗೆ ಗೊತ್ತಿರದೆ ರೈಲುಡಬ್ಬಿಯಲ್ಲಿ ಕುಳಿತುಕೊಂಡಿದ್ದಾಗ ವಿಲ್ಲಿಪುರಂನಲ್ಲೇ ರೈಲು ಬದಲಾಯಿಸಬಹುದೆಂದೂ, ತಿಂಡಿವನಂವರೆಗೆ ಪ್ರಯಾಣ ಮಾಡಬೇಕಾಗಿಲ್ಲವೆಂದೂ ಮೌಲ್ವಿಯೊಬ್ಬರಿಂದ ತಿಳಿದುಬಂದ ಕಾರಣ 30ನೆಯ ತಾರೀಖು ಬೆಳಗಿನಝಾವ ಮೂರು ಗಂಟೆಗೆ ವಿಲ್ಲಿಪುರಂನಲ್ಲಿ ಇಳಿದರು. ಅಲ್ಲಿನ ಭೋಜನ ಶಾಲೆಯೊಂದರಲ್ಲಿ ಊಟಕ್ಕಾಗಿ ಮಧ್ಯಾಹ್ನದವರೆಗೂ ಕಾದು ಕುಳಿತಿದ್ದು ಊಟವಾದ ನಂತರ ಉಳಿದಿದ್ದ ಹಣದಲ್ಲಿ ಮಾಂಬಲಪಟ್ಟುವಿನವರೆಗೆ ರೈಲಿನಲ್ಲಿ ಪ್ರಯಾಣ ಮಾಡಿ ಅರುಣಾಚಲಕ್ಕೆ ಇನ್ನುಳಿದ ಮೂವತ್ತು ಮೈಲಿಗಳ ದೂರವನ್ನು ಕಾಲುನಡಿಗೆಯಿಂದಲೇ ಹೋಗುವುದೆಂದು ತೀರ್ಮಾನಿಸಿದರು. ಅದರಂತೆ ಮಧ್ಯಾಹ್ನದ ಸುಡು ಬಿಸಿಲಿನಲ್ಲಿ 11 ಮೈಲಿಗಳಷ್ಟು ನಡೆದು ಸಂಜೆಯ ವೇಳೆಗೆ ಬಹಳವಾಗಿ ದಣಿದು ಅರಿಯಾನಿನಲ್ಲೂರಿನ ದೇವಸ್ಥಾನವನ್ನು ತಲುಪಿ ದೇವಾಲಯದ ಒಳಗಿನ ಮಂಟಪವೊಂದರಲ್ಲಿ ಕುಳಿತು ಧ್ಯಾನಮಗ್ನರಾದರು. ಸ್ವಲ್ಪ ಸಮಯದ ನಂತರ ದೇವಾಲಯದ ಬಾಗಿಲನ್ನು ಹಾಕುವ ಸಮಯವಾಗಲು ಅರ್ಚಕರು ಬಂದು ಅವರನ್ನು ಎಬ್ಬಿಸಿದರು. ಆಗ ಅವರಿಗೆ ಬಹಳ ಹಸಿವಾಗಿದ್ದ ಕಾರಣ ತಮಗೆ ಸ್ವಲ್ಪ ಪ್ರಸಾದವನ್ನು ಕೊಡಿ ಎಂದು ಅರ್ಚಕರನ್ನು ಕೇಳಿಕೊಂಡರು. ಆದರೆ ಅರ್ಚಕರು ಇಲ್ಲಿ ಪ್ರಸಾದವೇನೂ ಉಳಿದಿಲ್ಲವೆಂದೂ ಆದರೆ ಹತ್ತಿರಿದ್ದ ಕೀಲೂರಿನ ದೇವಾಲಯಕ್ಕೆ ತಮ್ಮೊಡನೆ ಬಂದರೆ ಬಹುಶಃ

ಬಡಿಸಿ ಊಡಿಸಿದನು. ಆ ಪ್ರಸಾದವನ್ನು ಕೈಯಲ್ಲಿ ಹಿಡಿದುಕೊಂಡು ಅವರು ಕುಡಿಯುವ ನೀರಿಗಾಗಿ ಹತ್ತಿರಿದ್ದ ಅಗ್ರಹಾರದ ಬಳಿ ಬಂದಾಗ ಬಸವಳಿದು ರಸ್ತೆಯ ಮಧ್ಯದಲ್ಲೇ ಬಿದ್ದುಬಿಟ್ಟರು. ಸ್ವಲ್ಪ ಸಮಯದ ನಂತರ ಎಚ್ಚರ ತಿಳಿದು ನೆಲದಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿದ್ದ ಪ್ರಸಾದವನ್ನು ಎತ್ತಿಕೊಳ್ಳುತ್ತಿರುವಾಗ ಸುತ್ತಲೂ ನೆರೆದಿದ್ದ ಜನಸಮೂಹದಲ್ಲಿದ್ದ ಮುತ್ತುಕೃಷ್ಣ ಭಾಗವತರೆಂಬುವರು ನೋಡಿ ಕನಿಕರದಿಂದ ಈ ಬಾಲಕನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಅಲ್ಲಿ ಅಂದಿನ ರಾತ್ರಿ ಕಳೆಯಿತು. ಮರುದಿನವೇ ಗೋಕುಲಾಷ್ಟಮಿ. ಆ ಪುಣ್ಯದಿನದಂದು ಭಾಗವತರ ಸಾಧ್ವೀ ಪತ್ನಿಯು ಪ್ರೀತಿಯಿಂದ ಕೊಟ್ಟ ತಂಗಳೂಟವನ್ನು ಮಾಡಿ ತಾವು ಬಹಳವಾಗಿ ಬಳಲಿದ್ದರಿಂದ ಇನ್ನುಳಿದ ದೂರವನ್ನು ರೈಲಿನಲ್ಲಿ ಪ್ರಯಾಣಮಾಡಲು ಮನಸ್ಸಿನೊಳಗೆ ತೀರ್ಮಾನಿಸಿ ತಮ್ಮ ಕಿವಿಗಳಲ್ಲಿದ್ದ ಚಿನ್ನದ ಕಡುಕನ್ನು ಒತ್ತೆಯಾಗಿಟ್ಟುಕೊಂಡು ಸ್ವಲ್ಪ ಹಣವನ್ನು ಕೊಡಬೇಕೆಂದು ಭಾಗವತರನ್ನೇ ಕೇಳಲು ಭಾಗವತರು ಅದನ್ನು ಪರಿಶೀಲಿಸಿ ಮೂರು ರೂಪಾಯಿಗಳನ್ನೂ ತಮ್ಮ ವಿಳಾಸವನ್ನೂ ಇತ್ತು ಇದನ್ನು ಮತ್ತೆ ಯಾವಾಗ ಬೇಕಾದರೂ ಹಿಂದಕ್ಕೆ ಪಡೆಯಬಹುದೆಂಬ ಆಶ್ವಾಸನೆಯನ್ನೂ ನೀಡಿದರು. ಭಾಗವತರ ಪತ್ನಿಯು ಅಂದಿನ ರಾತ್ರಿ ಶ್ರೀ ಕೃಷ್ಣಪರಮಾತ್ಮನ ನೈವೇದ್ಯಕ್ಕಾಗಿ ತಯಾರಿಸಿದ ಭಕ್ಷ್ಯಗಳನ್ನೇ ದಾರಿಯ ತಿಂಡಿಗೆಂದು ಒಂದು ಪೊಟ್ಟಣದಲ್ಲಿ ಕಟ್ಟಿಕೊಟ್ಟರು. ಶ್ರೀ ರಮಣರು ಅದನ್ನು ಸ್ವೀಕರಿಸಿ ಆ ದಂಪತಿಗಳಿಂದ ಬೀಳ್ಕೊಂಡು ಸ್ವಲ್ಪ ದೂರ ಹೋದನಂತರ ಭಾಗವತರು ಕೊಟ್ಟ ವಿಳಾಸದ ಚೀಟಿಯನ್ನು ಅಲ್ಲಿಯೇ ಹರಿದುಹಾಕಿದರು. ನಂತರ ರೈಲ್ವೇ ನಿಲ್ದಾಣವನ್ನು ತಲುಪಿದಾಗ ಮರುದಿನದ ಬೆಳಗಿನವರೆಗೆ ರೈಲು ಇಲ್ಲವೆಂದು ತಿಳಿದು ನಿಲ್ದಾಣದಲ್ಲೇ ಮಲಗಿದರು. ಬೆಳಗಿನ ದಿನವಾದ ಸೆಪ್ಟೆಂಬರ್ 1, 1896 ರಂದು ಬೆಳಗಿನ ಝಾವದ ರೈಲನ್ನು ಹತ್ತಿ ಸ್ವಲ್ಪಹೊತ್ತಿನೊಳಗೇ ತಿರುವಣ್ಣಾಮಲೆ

ನಗರದ ಬೀದಿಯಲ್ಲಿ ಸುತ್ತಾಡುತ್ತಿರುವಾಗ ಕ್ಷೌರಿಕನೊಬ್ಬನು ಅವರಿಗೆದುರಾಗಿ "ನಿಮಗೆ ಕ್ಷೌರಮಾಡಬೇಕೇನು?" ಎಂದು ಕೇಳಿದನು. "ಹೌದು" ಎಂದು ಅದಕ್ಕೆ ಉತ್ತರವಿತ್ತಾಗ ಅವರನ್ನು ಬಳಿಯಿದ್ದ 'ಅಯ್ಯನ್ ಕೊಳಂ' ಎಂಬ ಕಲ್ಯಾಣಿಯ ಬಳಿಗೆ ಕರೆದುಕೊಂಡು ಹೋಗಿ ನುಣ್ಣಗೆ ಕ್ಷೌರವನ್ನು ಮಾಡಿದನು. ನಂತರ ಶ್ರೀ ರಮಣರು ಆ ಕೊಳದ ಮೆಟ್ಟಲಿನ ಮೇಲೆ ನಿಂತು ತಮ್ಮ ಬಳಿ ಉಳಿದಿದ್ದ ಚಿಲ್ಲರೆ ಹಣವನ್ನೂ, ಹಿಂದಿನ ದಿನ ಭಾಗವತರ ಪತ್ನಿಯಿತ್ತಿದ್ದ ತಿಂಡಿಯ ಪೊಟ್ಟಣವನ್ನೂ ನೀರಿನೊಳಗೆ ಎಸೆದುಬಿಟ್ಟರು. ನಂತರ ತಮ್ಮ ಜನಿವಾರವನ್ನೂ ಕಿತ್ತೆಸೆದು ಉಟ್ಟ ಬಟ್ಟೆಗಳೆಲ್ಲವನ್ನೂ ಕಳಚಿಹಾಕಿ ಕೇವಲ ಕೌಪೀನವೊಂದನ್ನೇ ಉಳಿಸಿಕೊಂಡರು. ಅಂದಿನಿಂದ ಅವರು ಜೀವನ ಪರ್ಯಂತ ಕೇವಲ ಕೌಪೀನವೊಂದನ್ನೇ ಧರಿಸುತ್ತಿದ್ದರು ಮತ್ತು ಹಣವನ್ನು ಮತ್ತೆ ಎಂದೂ ಸ್ಪರ್ಶಿಸಲಿಲ್ಲ. ಅವರ ವೈರಾಗ್ಯವು ಎಷ್ಟು ತೀವ್ರವಾಗಿತ್ತೆಂದರೆ 'ಕೊರಡಿಗೆ ಸಮಾನವಾದ ತಮ್ಮ ಶರೀರಕ್ಕೆ ಸ್ನಾನವೆಂಬ ಸುಖಭೋಗವೇಕೆ ಬೇಕು?' ಎಂದು ಭಾವಿಸಿ ಸ್ನಾನವಿಲ್ಲದೆಯೇ ದೇವಾಲಯಕ್ಕೆ ಹಿಂದಿರುಗುತ್ತಿದ್ದರು. ಆಗ ಆಶ್ಚರ್ಯವೆಂಬಂತೆ ಇದ್ದಕ್ಕಿದ್ದಂತೆ ಜೋರಾಗಿ ಮಳೆ ಸುರಿದು ಅವರನ್ನು ಆಪಾದಮಸ್ತಕವಾಗಿ ತೋಯಿಸಿಯೇಬಿಟ್ಟಿತು.

ಶ್ರೀ ರಮಣರು ತೊಯ್ದಿದ್ದ ಈ ಸ್ಥಿತಿಯಲ್ಲೇ ದೇವಾಲಯವನ್ನು ಮತ್ತೆ ಪ್ರವೇಶಿಸಿ ಪ್ರಾಕಾರದೊಳಗಿದ್ದ ಸಾವಿರಕಾಲು ಮಂಟಪ ಎಂಬಲ್ಲಿ ಧ್ಯಾನಮಗ್ನರಾಗಿ ಕುಳಿತುಬಿಟ್ಟರು. ಕೇವಲ ಹದಿನೇಳು ವರ್ಷದ ಆ ಬಾಲಕನು ಹೀಗೆ ಮೌನವಾಗಿ ಕಣ್ಣುಮುಚ್ಚಿ ಕುಳಿತಿರುವುದನ್ನು ಕಂಡು ಅಲ್ಲಿಗೆ ಆಟಕ್ಕಾಗಿ ಬರುತ್ತಿದ್ದ ಹುಡುಗರು ಅವರಿಗೆ ಅನೇಕ ಬಗೆಯ ಕಿರುಕುಳಗಳನ್ನು ಕೊಡಲು ಮೊದಲುಮಾಡಿದರು. ಆಗ ಶ್ರೀ ರಮಣರು ಆ ಮಂಟಪದಡಿಯೇ ಇದ್ದ 'ಪಾತಾಳಗುಹೆ' ಎಂಬ ಕತ್ತಲು ಗವಿಯೊಳಗೆ ಹೋಗಿ ವಾಸಿಸಲು ಮೊದಲು ಮಾಡಿದರು. ಅಲ್ಲಿಯೂ ಅವರು ಮೌನದಲ್ಲಿದ್ದು

ಮಾಡಿದುವು. ಅವುಗಳಿಂದ ರಕ್ತ, ಕೀವುಗಳು ಒಸರುತ್ತಿದ್ದುವು. ಇವುಗಳಿಂದ ಉಂಟಾದ ಕಲೆಯು ಅವರ ಶರೀರದಲ್ಲಿ ಶಾಶ್ವತವಾಗಿ ಉಳಿದುಬಿಟ್ಟಿತು. ಅಲ್ಲಿಯೂ ತುಂಟ ಹುಡುಗರು ಕೊಡುತ್ತಿದ್ದ ಉಪದ್ರವಗಳಿಂದ ಅವರನ್ನು ರಕ್ಷಿಸಲು ಶೇಷಾದ್ರಿಸ್ವಾಮಿಗಳೆಂಬುವರು ಬಹಳವಾಗಿ ಪ್ರಯತ್ನವನ್ನು ಮಾಡಿದರು. ಆದರೆ ಅದು ಅಷ್ಟು ಫಲಕಾರಿಯಾಗಲಿಲ್ಲ. ಹೀಗೆಯೇ ಕೆಲವು ವಾರಗಳು ಕಳೆದ ನಂತರ ಶ್ರೀ ರಮಣರು ಆಲಯದ ಪ್ರಾಕಾರದೊಳಗೇ ಇದ್ದ ಸುಬ್ರಹ್ಮಣ್ಯಸ್ವಾಮಿ ದೇವಾಲಯ, ಬಾಳೆಯ ತೋಟ, ಹೂದೋಟ, ಮಂಗೈಪಿಳ್ಳೈಯಾರ್ ಆಲಯ ಮತ್ತು ಇಳ್ಪುಪ್ಪೈ ಮರದಡಿ, ಹೀಗೆ ಅನೇಕ ಕಡೆಗಳಲ್ಲಿ ಮೌನವಾಗಿ, ಧ್ಯಾನಸ್ಥರಾಗಿರುತ್ತ ಸುಮಾರು ಮೂರು ತಿಂಗಳುಗಳ ಕಾಲ ಕಳೆದರು. ಆ ಕಾಲದಲ್ಲಿ ಅವರು ಮೌನವಾಗೇ ಇರುತ್ತಿದ್ದುದರಿಂದ ಜನರು ಅವರನ್ನು ಮೌನಸ್ವಾಮಿ ಎಂದೂ ಬ್ರಾಹ್ಮಣಬಾಲಕನಾದುದರಿಂದ ಬ್ರಾಹ್ಮಣಸ್ವಾಮಿ ಎಂದೂ ಕರೆಯುತ್ತಿದ್ದರು. ಈ ಸಮಯದಲ್ಲೇ ಅಂದರೆ ಸುಮಾರು ನವೆಂಬರ್ 1896 ರಲ್ಲಿ ದೈವಸಂಕಲ್ಪದಂತೆ ಉದ್ದಂಡಿ ನಾಯನಾರ್ ಎಂಬುವರೊಬ್ಬರು ಬಂದು ಕಾಲಕಾಲಕ್ಕೆ ಶ್ರೀ ರಮಣರಿಗೆ ಅನ್ನಪಾನಾದಿಗಳನ್ನಿತ್ತು ಅವರ ಶಿಷ್ಯವೃತ್ತಿಯನ್ನು ಮತ್ತು ಸೇವೆಯನ್ನೂ ಕೈಗೊಂಡು ಶ್ರೀ ರಮಣರ ಶರೀರವನ್ನು ಉಳಿಸಿ ಕಾಪಾಡಿದರು. ನಂತರ ಶ್ರೀ ರಮಣರು ಸುಮಾರು ಒಂದೂವರೆ ವರ್ಷಗಳ ಕಾಲ ನಗರದ ಹೊರಗಿದ್ದ ಮತ್ತು ಶಾಂತ ಪರಿಸರದಿಂದ ಕೂಡಿದ ಗುರುಮೂರ್ತಂ ಎಂಬ ದೇವಾಲಯದಲ್ಲಿ ವಾಸಿಸಿದರು. ಆಮೇಲೆ ಸುಮಾರು ಆರು ತಿಂಗಳುಗಳು ಕಾಲ ಅದರ ಬಳಿಯೇ ಇದ್ದ ಮಾವಿನ ತೋಪಿನಲ್ಲಿದ್ದರು. ಅಲ್ಲಿಗೆ ಪಳನಿಸ್ವಾಮಿಯೆಂಬ ಮತ್ತೊಬ್ಬ ಭಕ್ತನು ಬಂದು ಅವರ ಸೇವಾವೃತ್ತಿಯನ್ನು ಕೈಗೊಂಡನು. ಇಲ್ಲಿರುವಾಗಲೇ ಶ್ರೀ ರಮಣರ ಚಿಕ್ಕಪ್ಪ ನೆಲ್ಲಿಯಪ್ಪ ಅಯ್ಯರ್‌ಗೆ ಶ್ರೀ ರಮಣರು ಇಲ್ಲಿದ್ದ ಸಮಾಚಾರವು ತಿಳಿದುಬಂದು ಅವರನ್ನು ಮನೆಗೆ

ಬೆಟ್ಟದ ಪೂರ್ವದಿಕ್ಕಿನಲ್ಲಿದ್ದ ಪ್ರವಾಳಗಿರಿ (ಪವಷಕ್ಕುನ್ರು) ಎಂಬಲ್ಲಿಯೂ ಕೆಲಕಾಲ ವಾಸಿಸಿದರು. ಇಲ್ಲಿರುವಾಗ ಅವರ ಮಾತೆ ಅಳಗಮ್ಮಾಳ್ ಬಂದು ಮಗನಿಗೆ ಹಿಂದಿರುಗಬೇಕೆಂದು ಕಣ್ಣೀರುಗರೆದು ಕೇಳಿಕೊಂಡರು. ಆದರೆ ಶ್ರೀ ರಮಣರು ಸ್ವಲ್ಪವೂ ವಿಚಲಿತರಾಗಲಿಲ್ಲ. ತಾಯಿಯೊಡನೆ ಮಾತೂ ಸಹ ಆಡಲಿಲ್ಲ. ಆಗ ಬಳಿಯಿದ್ದ ಭಕ್ತರೊಬ್ಬರು "ನಿಮ್ಮ ತಾಯಿ ಅಷ್ಟೊಂದು ದುಃಖಿಸುತ್ತಿರುವಾಗ ಕಡೆಯ ಪಕ್ಷ ಏನಾದರೂ ಉತ್ತರವನ್ನು ಬರೆದಾದರೂ ತಿಳಿಸಬಹುದಲ್ಲವೇ?" ಎಂದು ಹೇಳಿದರು. ಆಗ ಒಂದು ಚೀಟಿಯಲ್ಲಿ ಶ್ರೀ ರಮಣರು ಹೀಗೆ ಬರೆದರು :

"ಅವರವರ ಪ್ರಾಪ್ತಿಗನುಗುಣವಾಗಿ ಭಗವಂತನು ಕಾರ್ಯಗಳನ್ನು ನಿಯಂತ್ರಿಸುತ್ತಾನೆ. ಎಂದಿಗೂ ನಡೆಯದ ಕೆಲಸವು ನಾವು ಎಷ್ಟು ಪ್ರಯತ್ನಿಸಿದರೂ ನಡೆಯದು; ಯಾವುದು ನಡೆಯುವುದೋ ಅದನ್ನು ಎಷ್ಟು ತಡೆದರೂ ನಡೆದೇ ತೀರುವುದು. ಇದು ನಿಶ್ಚಯ. ಇದನ್ನರಿತು ನಾವು ಸುಮ್ಮನಿರುವುದೇ ಎಲ್ಲ ರೀತಿಯಲ್ಲೂ ಒಳ್ಳೆಯದು."

ಈ ಉತ್ತರದಿಂದ ತಾಯಿಯೂ ನಿರಾಸೆಯಿಂದಲೇ ಹಿಂದಿರುಗಬೇಕಾಯಿತು. ಈ ಘಟನೆಯು ನಡೆದ ಸ್ವಲ್ಪಕಾಲದ ನಂತರ ಶ್ರೀ ರಮಣರು ಬೆಟ್ಟದ ಮೇಲೆ ಪೂರ್ವದಿಕ್ಕಿನಲ್ಲಿದ್ದ ವಿರೂಪಾಕ್ಷ ಗುಹೆ ಎಂಬಲ್ಲಿಗೆ ತಮ್ಮ ನಿವಾಸವನ್ನು ಬದಲಾಯಿಸಿ ಅಲ್ಲಿ ಸುಮಾರು 17 ವರ್ಷಗಳ ಕಾಲ ವಾಸಿಸಿದರು. ಇಲ್ಲಿ ಅವರು ತಮ್ಮ ಮೌನವನ್ನು ತ್ಯಜಿಸಿ ಕ್ರಮೇಣ ಭಕ್ತರೊಡನೆ ಸಂಭಾಷಿಸಲು ಮೊದಲುಮಾಡಿ ತತ್ತ್ವಜಿಜ್ಞಾಸುಗಳಾದ ಅನೇಕ ಭಕ್ತರು ತಮ್ಮ ಸಂದೇಹಗಳ ನಿವಾರಣೆಗಾಗಿ ಕೇಳುತ್ತಿದ್ದ ಅನೇಕ ಪ್ರಶ್ನೆಗಳಿಗೆ ಸೂಕ್ತ ಉತ್ತರಗಳನ್ನು ನೀಡಿ ಸಾಧನೆಯಲ್ಲಿ ಮಾರ್ಗದರ್ಶನ ಮಾಡುತ್ತಿದ್ದರು. ಹೀಗೆ ಸುಮಾರು 1900 ರಲ್ಲಿ ಅಂದರೆ ಶ್ರೀ ರಮಣರಿಗೆ 21 ವರ್ಷ ವಯಸ್ಸಾಗಿದ್ದಾಗ ಗಂಭೀರಂ ಶೇಷಯ್ಯರ್ ಎಂಬ ಭಕ್ತರ ಪ್ರಶ್ನೆಗಳಿಗೆ ನೀಡಿದ ಉತ್ತರ

ಗಳನ್ನು 'ವಿಚಾರ ಸಂಗ್ರಹ'(Self Enquiry)ವೆಂಬ ಮತ್ತು ಶಿವಪ್ರಕಾಶಂ ಪಿಳ್ಳೈ ಎಂಬ ಭಕ್ತರು 1902 ರಲ್ಲಿ ಕೇಳಿದ ಪ್ರಶ್ನೆಗಳಿಗೆ ನೀಡಿದ ಉತ್ತರಗಳನ್ನು 'ನಾನು ಯಾರು?' (Who am I) ಎಂಬ ಕಿರುಹೊತ್ತಿಗೆಗಳನ್ನಾಗಿ ಶ್ರೀ ರಮಣಾಶ್ರಮದವರು ಪ್ರಕಟಿಸಿದ್ದಾರೆ.

1907 ರಲ್ಲಿ ಉದ್ದಾಮ ಪಂಡಿತರೂ, ಮಂತ್ರವೇತ್ತರೂ, ವೇದಶಾಸ್ತ್ರ ಪಾರಂಗತರೂ, ಆಶು ಕವಿಗಳೂ, ಉನ್ನತಮಟ್ಟದ ಸಾಧಕರೂ ಮತ್ತು ಕಾವ್ಯಕಂಠ ಎಂದೂ ಪ್ರಸಿದ್ಧರಾದ ವಾಶಿಷ್ಠ ಗಣಪತಿ ಮುನಿಗಳೆಂಬುವರು ಶ್ರೀ ರಮಣರ ಬಳಿಗೆ ಬಂದರು. ಇವರು ಪುರಾಣ, ಇತಿಹಾಸ, ಕಾವ್ಯ, ಸಂಪೂರ್ಣ ಋಗ್ವೇದ, ಉಪನಿಷತ್ತುಗಳು ಹಾಗೂ ಇತರ ಮಂತ್ರಶಾಸ್ತ್ರ ಗ್ರಂಥಗಳ ಆಳವಾದ ಅಧ್ಯಯನವನ್ನು ಮಾಡಿದ್ದರು. ಕೋಟಿಕೋಟಿ ಶಿವಪಂಚಾಕ್ಷರಿ ಜಪವನ್ನು ಸಹ ಮಾಡಿ ಮುಗಿಸಿದ್ದರು. ಆದರೂ ತಪಸ್ಸಿನ ನಿಜವಾದ ತತ್ತ್ವವನ್ನು ತಾವು ಇನ್ನೂ ಸರಿಯಾಗಿ ಅರಿತಿಲ್ಲವೆಂಬ ಸಂಶಯ ಅವರನ್ನು ಕಾಡುತ್ತಿತ್ತು. ಆದುದರಿಂದ ಅವರು ತಮಗಿಂತ ಕಿರಿಯರಾಗಿದ್ದ ಶ್ರೀ ರಮಣರ ಬಳಿ ಸಾರಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ತಮ್ಮ ಸಂಶಯ ಗಳನ್ನು ಬಿನ್ನವಿಸಿಕೊಂಡು ಅವುಗಳಿಗೆಲ್ಲಕ್ಕೂ ತೃಪ್ತಿಯಾಗುವ ಉತ್ತರ ಗಳನ್ನು ಪಡೆದುಕೊಂಡರು. ಹೀಗೆ ಗಣಪತಿಮುನಿಗಳು ಶ್ರೀ ರಮಣರ ಶಿಷ್ಯರಾದರು. ಈ ಮುನಿಗಳಿಗೇ ಅನೇಕ ಮಂದಿ ಶಿಷ್ಯರುಗಳಿದ್ದರು. ಇವರೆಲ್ಲರೂ ನಂತರ ಶ್ರೀ ರಮಣಮಹರ್ಷಿಗಳ ಶಿಷ್ಯವರ್ಗಕ್ಕೆ ಸೇರಿದವ ರಾದರು. ಮುನಿಗಳೂ, ಅವರ ಶಿಷ್ಯವೃಂದವೂ ಇತರ ಭಕ್ತರೂ ಅನೇಕ ಸಂದರ್ಭಗಳಲ್ಲಿ ಮಹರ್ಷಿಗಳನ್ನು ಪ್ರಶ್ನಿಸಿ ಪಡೆದ ಉತ್ತರಗಳನ್ನು ಸಂಗ್ರಹಿಸಿ ಶ್ರೀ ರಮಣಗೀತೆಯೆಂಬ ಭಗವದ್ಗೀತೆಯಂತೆಯೇ ಹದಿನೆಂಟು ಅಧ್ಯಾಯ ಗಳಿಂದ ಕೂಡಿದ ಕೃತಿಯನ್ನು ಮುನಿಗಳು ನಂತರ ರಚಿಸಿದರು. ಈ ಮುನಿ ಗಳೇ ಈ ಬ್ರಾಹ್ಮಣಸ್ವಾಮಿಯ ಹೆಸರು ವೆಂಕಟರಾಮನ್ ಎಂಬುದಾಗಿ ಬಳಿ ಯಿದ್ದವರೊಡನೆ ಕೇಳಿ ತಿಳಿದು ಅವರನ್ನು ಭಗವಾನ್ ಶ್ರೀ ರಮಣಮಹರ್ಷಿ ಗಳು ಎಂದು ಕರೆದರು. ಅಂದಿನಿಂದ ಇದೇ ಹೆಸರಿನಿಂದಲೇ ಇವರು ಭಕ್ತ ವೃಂದದಲ್ಲಿ ಚಿರಪರಿಚಿತರಾಗಿದ್ದಾರೆ. 1911 ರಲ್ಲಿ ಎಫ್. ಹೆಚ್. ಹಂಫ್ರೀಸ್ ಎಂಬ ಆಂಗ್ಲದೇಶೀಯರು ಶ್ರೀ ರಮಣರನ್ನು ಮೂರು ಬಾರಿ ಸಂದರ್ಶಿಸಿ

ಆ ಸಂದರ್ಶನದ ಬಗ್ಗೆ ವಿವರವಾಗಿ ಇಂಗ್ಲೆಂಡಿನ 'ಇಂಟರ್‌ನ್ಯಾಷನಲ್ ಸೈಕಿಕ್ ಗೆಜೆಟ್'ನಲ್ಲಿ ಪ್ರಕಟಿಸಿದರು.

ಶ್ರೀ ರಮಣರ ತಾಯಿ 1914 ರಲ್ಲಿ ಮತ್ತೊಮ್ಮೆ ಶ್ರೀ ರಮಣರ ಬಳಿ ಬಂದಾಗ ತೀವ್ರವಾಗಿ ಖಾಯಿಲೆ ಬಿದ್ದರು. ಆಗ ಶ್ರೀ ರಮಣರೇ ಸ್ವತಃ ತಾಯಿಯ ಸೇವೆಯನ್ನು ಕೈಗೊಂಡರು. ಖಾಯಿಲೆಯಿಂದ ಗುಣಮುಖರಾದ ನಂತರ ತಾಯಿಯು ಮತ್ತೆ ಮನೆಗೆ ಹಿಂದಿರುಗಿ ಸ್ವಲ್ಪಸಮಯದ ನಂತರ ವೃದ್ಧಾಪ್ಯದಲ್ಲಿ ತಮ್ಮನ್ನು ಕಾಪಾಡಲು ಯಾರೂ ದಿಕ್ಕಿಲ್ಲದ ಪರಿಸ್ಥಿತಿಗೆ ಸಿಲುಕಿ 1916 ರಲ್ಲಿ ಮತ್ತೆ ಶ್ರೀ ರಮಣರನ್ನೇ ಆಶ್ರಯಿಸಿದರು. ಈ ಬಾರಿ ಸರ್ವಸಂಗ ಪರಿತ್ಯಾಗಿಯಾದ ಮತ್ತು ಪರಮ ವೈರಾಗ್ಯಮೂರ್ತಿಯಾದ ಶ್ರೀ ಮಹರ್ಷಿಗಳು ತಮ್ಮ ತಾಯಿಯನ್ನು ಸಂರಕ್ಷಿಸುವ ಸಂಪೂರ್ಣ ಹೊಣೆಗಾರಿಕೆಯನ್ನು ವಹಿಸಿಕೊಂಡರು. ಹೀಗೆ ಮಾತೆಯು ಶ್ರೀ ರಮಣಮಹರ್ಷಿಗಳ ಬಳಿಯೇ ಉಳಿದುಕೊಂಡಾಗ ಶ್ರೀ ರಮಣರು ವಿರೂಪಾಕ್ಷ ಗುಹೆಗೆ ಸ್ವಲ್ಪ ಮೇಲಿದ್ದ ಸ್ಕಂದಾಶ್ರಮ ಎಂಬ ನೀರಿನ ವಸತಿಯಿದ್ದ ಸ್ಥಳಕ್ಕೆ ತಮ್ಮ ನಿವಾಸವನ್ನು ಬದಲಾಯಿಸಿದರು. ತಾಯಿಯು ಮಹರ್ಷಿಗಳ ಬಳಿಯೇ ಕೊನೆಯವರೆಗೂ ಇದ್ದು ಮಹರ್ಷಿಗಳಿಂದ ಆತ್ಮಜ್ಞಾನವನ್ನು ಪಡೆದು 19 ಮೇ 1922 ರಂದು ಸ್ಕಂದಾಶ್ರಮದಲ್ಲೇ ನಿರ್ವಾಣವನ್ನು ಪಡೆದರು.

ಮಾತೆಯ ನಿರ್ವಾಣದ ನಂತರ ಮಹರ್ಷಿಗಳ ಭಕ್ತರ ನೆರವಿನಿಂದ ಮಾತೆಯನ್ನು ಸಮಾಧಿ ಮಾಡಲಾಯಿತು. ಆ ಸಮಾಧಿಯ ಮೇಲೆ ನಂತರ ರಚಿಸಿದ ಮಾತೃಭೂತೇಶ್ವರ ದೇವಾಲಯವನ್ನೊಳಗೊಂಡಿರುವ ಅರುಣಾಚಲದ ದಕ್ಷಿಣದಲ್ಲಿರುವ ಈಗ ಶ್ರೀ ರಮಣಾಶ್ರಮವೆಂದು ಪ್ರಖ್ಯಾತವಾಗಿರುವ ಸ್ಥಳಕ್ಕೆ ಶ್ರೀ ರಮಣರು ಬಂದು ನೆಲಸಿದರು. 1930 ರಲ್ಲಿ ಪಾಲ್ ಬ್ರಂಟನ್ ಎಂಬ ಪಾಶ್ಚಾತ್ಯರು ಇಲ್ಲಿ ಭಗವಾನರನ್ನು ದರ್ಶಿಸಿ ತಮ್ಮ ಸ್ವದೇಶಕ್ಕೆ ಹಿಂದಿರುಗಿದ ನಂತರ 'A Search in Secret India' ಎಂಬ ಈಗ ಜಗದ್ವಿಖ್ಯಾತವಾಗಿರುವ ಆಂಗ್ಲಭಾಷೆಯ ಪುಸ್ತಕವೊಂದನ್ನು ಬರೆದರು. ಅದರಲ್ಲಿ ಶ್ರೀ ರಮಣಮಹರ್ಷಿಗಳ ಸನ್ನಿಧಿಯಲ್ಲಿ ತಮಗೆ ಆದ ಗಹನವಾದ ಅನುಭವಗಳನ್ನೂ ಮಹರ್ಷಿಗಳನ್ನು ಅವರು ಭೇಟಿ ಮಾಡಿದ ಬಹಳ ಆಶ್ಚರ್ಯಕರವಾದ ರೀತಿಯನ್ನೂ, ಮಹರ್ಷಿಗಳ ಸಂಕ್ಷಿಪ್ತ ಜೀವನ ಚರಿತ್ರೆ

ಯನ್ನೂ ಅವರ ಉಪದೇಶಗಳನ್ನೂ ಹೃದಯಂಗಮವಾಗಿ ಬಣ್ಣಿಸಿದರು. ಈ ಪುಸ್ತಕದ ಮೂಲಕ ವಿಶ್ವದಾದ್ಯಂತ ಮಹರ್ಷಿಗಳ ದಿವ್ಯ ಜೀವನ ಚರಿತ್ರೆಯು ಪ್ರಚಾರವಾಗಿ ಏಪ್ರಿಲ್ 1950, 14 ರಂದು ಮಹರ್ಷಿಗಳ ಮಹಾಸಮಾಧಿ ಯಾಗುವವರೆಗೂ ವಿದೇಶದಿಂದಲೂ ಸ್ವದೇಶದಿಂದಲೂ ತಂಡೋಪತಂಡವಾಗಿ ಭಕ್ತರು, ಸಾಧಕರು, ಜಿಜ್ಞಾಸುಗಳು ಮತ್ತು ಮುಮುಕ್ಷುಗಳು ಭಗವಾನರ ಸನ್ನಿಧಿಗೆ ಬರಲಾರಂಭಿಸಿದರು. ವಿದೇಶಿ ಭಕ್ತರಲ್ಲಿ ಮೇಜರ್ ಚಾಡ್ವಿಕ್ ಮತ್ತು ಎಸ್. ಎಸ್. ಕೋಹೆನ್ ಎಂಬುವರು ತಮ್ಮ ದೇಶಗಳಿಗೆ ಮತ್ತೆ ಹಿಂದಿರುಗದೇ ಆಶ್ರಮದ ಬಳಿಯೇ ನೆಲಸಿ ಸಾಧನೆಯಲ್ಲಿ ನಿರತರಾಗಿದ್ದು ಅಲ್ಲಿಯೇ ನಿರ್ವಾಣವನ್ನು ಪಡೆದರು.

ಶ್ರೀ ರಮಣಮಹರ್ಷಿಗಳು ತಾವಾಗಿಯೇ ಯಾವುದನ್ನೂ ಬರೆಯಲಿಲ್ಲ. ಅವರ ಸಮಸ್ತ ರಚನೆಗಳೂ ಭಕ್ತರ ವಿನಂತಿಯ ಮೇರೆಗೇ. ಅವರ ಸನ್ನಿಧಿಯಲ್ಲಿ ಅನೇಕ ಭಕ್ತರುಗಳಿಗೆ ತಮ್ಮನ್ನು ಬಹಳ ಕಾಲದಿಂದಲೂ ಕಾಡುತ್ತಿದ್ದ ಅನೇಕ ಪ್ರಶ್ನೆಗಳಿಗೆ ಭಗವಾನರನ್ನು ಪ್ರಶ್ನಿಸದೆಯೇ ಪರಿಹಾರವು ದೊರಕಿದ ಅನುಭವಗಳಾಗುತ್ತಿದ್ದುವು. ಬೇರೆ ಯಾವೆಡೆಯಲ್ಲೂ ದೊರಕದ ಶಾಂತಿ ಸಮಾಧಾನಗಳು ಭಗವಾನರ ಸನ್ನಿಧಿಯಲ್ಲಿ ಕುಳಿತ ಮಾತ್ರಕ್ಕೇ ಭಕ್ತರಿಗೆ ದೊರಕುತ್ತಿತ್ತು. 'ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನ-ಸಂಶಯಾಃ' ಎಂಬ ದಕ್ಷಿಣಾಮೂರ್ತಿಯನ್ನು ಕುರಿತ ಸ್ತುತಿಯು ಭಗವಾನರ ವಿಷಯದಲ್ಲೂ ಅಷ್ಟೇ ಸಮಂಜಸವಾಗಿ ಹೊಂದುತ್ತದೆ ಎಂಬುದು ಭಕ್ತ-ರನೇಕರ ಅನುಭವ. ಹೀಗೆ ಮೌನವ್ಯಾಖ್ಯಾನವೇ ಅವರ ಮುಖ್ಯ ಉಪದೇಶವಾದರೂ ಭಕ್ತರು ಪ್ರಾಮಾಣಿಕವಾದ ಸಂದೇಹಗಳ ನಿವೃತ್ತಿಗಾಗಿ ಕೇಳಿದ ಅನೇಕ ಪ್ರಶ್ನೆಗಳಿಗೆ ಕೊಟ್ಟ ಸೂಕ್ತವಾದ ಉತ್ತರಗಳನ್ನು ಸಂಗ್ರಹಿಸಿ ಭಕ್ತರು ರಚಿಸಿದ ಅನೇಕ ಪುಸ್ತಕಗಳು ಶ್ರೀ ರಮಣಾಶ್ರಮದವರಿಂದ ಪ್ರಕಟವಾಗಿವೆ. ಆಂಗ್ಲಭಾಷೆಯಲ್ಲಿ ಆರ್ಥರ್ ಆಸ್ಬಾರ್ನ್‌ರವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ 'The Collected Works of Ramana Maharshi' ಎಂಬ ಪುಸ್ತಕದಲ್ಲಿ ಮಹರ್ಷಿಗಳು ರಚಿಸಿದ ಅನೇಕ ಸ್ತೋತ್ರಗಳನ್ನೂ ಅವುಗಳನ್ನು ರಚಿಸಿದ ಸಂದರ್ಭಗಳನ್ನೂ ವಿವರಿಸಲಾಗಿದೆ. ಮಹರ್ಷಿಗಳ ಜೀವನ ಚರಿತ್ರೆಯನ್ನೂ ಆಶ್ರಮದಲ್ಲಿ ಅವರ ಸನ್ನಿಧಿಯಲ್ಲಿ ಪ್ರತಿನಿತ್ಯವೂ ಭಕ್ತರೊಡನೆ

ನಡೆಯುತ್ತಿದ್ದ ಪ್ರಶ್ನೋತ್ತರಗಳನ್ನೂ ಅವರ ಉಪದೇಶಗಳನ್ನೂ ಆಶ್ರಮದ ಸಭಾಂಗಣದಲ್ಲಿ ಪ್ರತಿ ನಿತ್ಯವೂ ಜರುಗುತ್ತಿದ್ದ ಅನೇಕ ಬೋಧಪ್ರದವಾದ ಘಟನೆಗಳನ್ನೂ ಮುಂದೆ ಬರುವ ಅನೇಕ ಭಕ್ತರ ಮಾರ್ಗದರ್ಶನಕ್ಕಾಗಿ ದೊರಕಲೆಂಬ ಭಗವಂತನ ಸಂಕಲ್ಪದಂತೆ ಸಂಗ್ರಹಿಸುವ ಮಹತ್ಕಾರ್ಯದಲ್ಲಿ ಶ್ರೀಯುತರಾದ ಮುರುಗನಾರ್, ಬಿ. ವಿ. ನರಸಿಂಹಸ್ವಾಮಿ, ಶುದ್ಧಾನಂದ ಭಾರತಿಗಳು, ಮುನಗಾಲ ವೆಂಕಟರಾಮಯ್ಯ, ದೇವರಾಜ ಮೊದಲಿಯಾರ್, ಸೂರಿ ನಾಗಮ್ಮ ಮೊದಲಾದವರು ಪ್ರಮುಖವಾದ ಪಾತ್ರವನ್ನು ವಹಿಸಿದ್ದಾರೆ. ಈ ಎಲ್ಲಾ ಘಟನೆಗಳಲ್ಲಿ ಮಹರ್ಷಿಗಳ ಜೀವಕಾರುಣ್ಯ, ದೀನದಲಿತರಲ್ಲಿ ದಯೆ, ಸರ್ವಜೀವಿಗಳಲ್ಲಿ ಸಮತ್ವ, ಪಶುಪಕ್ಷಿಗಳಲ್ಲಿ ಮತ್ತು ಗಿಡಮರಗಳಲ್ಲಿಯೂ ಸಮಾನ ಪ್ರೀತಿ ಮೊದಲಾದ ಅನೇಕ ಗುಣಗಳಿಗೆ ಹೃದಯಂಗಮವಾದ ಉದಾಹರಣೆಗಳು ದೊರಕುತ್ತವೆ. ಮಹರ್ಷಿಗಳಿಗೆ ಆಶ್ರಮದಲ್ಲಿ ಏಕಾಂತ ಜೀವನವೆಂಬುದು ಇರಲೇ ಇಲ್ಲ. ಅವರ ದೈನಂದಿನ ಕಾರ್ಯಕ್ರಮಗಳೆಲ್ಲವೂ ಸಭಾಂಗಣದಲ್ಲಿ ಭಕ್ತರೆದುರಿಗೇ ಜರುಗುತ್ತಿತ್ತು. ಎಲ್ಲರಿಗೂ ಸದಾ ಪ್ರವೇಶವಿರುತ್ತಿದ್ದುದು ಶ್ರೀ ರಮಣಾಶ್ರಮದ ವೈಶಿಷ್ಟ್ಯ.

1948 ರ ಅಂತ್ಯದಲ್ಲಿ ರಮಣ ಮಹರ್ಷಿಗಳ ಎಡಮೊಳಕೈ ಮೇಲೊಂದು ಸಣ್ಣ ಗಂಟು ಕಾಣಿಸಿಕೊಂಡಿತು. 1949 ರ ಫೆಬ್ರವರಿ ವೇಳೆಗೆ ಅದು ದೊಡ್ಡದಾಗಿ ಬೆಳೆದ ಕಾರಣ ಆಶ್ರಮದ ವೈದ್ಯರು ಶಸ್ತ್ರಚಿಕಿತ್ಸೆ ಮಾಡಿ ಅದನ್ನು ತೆಗೆದು ಹಾಕಿದರು. ಆದರೆ ಅದು ಸ್ವಲ್ಪ ದಿನಗಳ ನಂತರ ಮತ್ತೆ ಕಾಣಿಸಿಕೊಂಡಿತು. ಆಗ ಅದನ್ನು ವಿಶೇಷ ಪರೀಕ್ಷೆಗೆ ಗುರಿಪಡಿಸಿದಾಗ ಅದು 'ಸಾರ್ಕೋಮಾ' ಎಂದು ಕರೆಯಲ್ಪಡುವ ಭಯಂಕರವಾದ ಕ್ಯಾನ್ಸರ್ ಎಂದು ಗೊತ್ತಾಗಿ ಭಕ್ತರ ಆಗ್ರಹದ ವಿನಂತಿಯ ಮೇರೆಗೆ ಮತ್ತೆ ಮೂರು ಬಾರಿ ಶಸ್ತ್ರಚಿಕಿತ್ಸೆ, ರೇಡಿಯಂ ಚಿಕಿತ್ಸೆ ಮೊದಲಾದುವುಗಳನ್ನು ಮಾಡಲಾಯಿತು. ಈ ಎಲ್ಲಾ ಸಂದರ್ಭಗಳಲ್ಲೂ ಮಹರ್ಷಿಗಳು ಶಾಂತಿ ಮತ್ತು ಸ್ಥೈರ್ಯಗಳಿಂದ ಸಿಡಿಲಿಗೆ ಸಮನಾದ ಆ ನೋವನ್ನು ಸಹಜವಾಗಿ ತಮಗೆ ಸಂಬಂಧವಿಲ್ಲದವರಂತೆ ಕೇವಲ ಸಾಕ್ಷಿಮಾತ್ರರಾಗಿದ್ದು ಸಹಿಸಿಕೊಂಡರು. ಒಮ್ಮೆ ಅವರೇ ಈ ಯಾತನೆಯನ್ನು ಕುರಿತು ಪ್ರಾಸಂಗಿಕವಾಗಿ "ಈ ನೋವು ಸಾವಿರ ಚೇಳುಗಳು ಏಕಕಾಲದಲ್ಲಿ ಕುಟುಕಿದರೆ ಆಗುವ ಯಾತನೆಗಿಂತಲೂ

ಮಿಗಿಲಾಗಿದೆ" ಎಂದು ಹೇಳಿದ್ದರು. ಆದರೆ ಈ ಚಿಕಿತ್ಸೆಗಳಿಂದ ಏನೂ ಉಪಯೋಗವಿಲ್ಲದಾಗಲು ಭಕ್ತರ ವಿನಂತಿಯ ಮೇರೆಗೆ ಮತ್ತು ಅವರೆಲ್ಲರ ಸಮಾಧಾನಕ್ಕಾಗಿ ಆಯುರ್ವೇದ, ಹೋಮಿಯೋಪತಿ, ಸಿದ್ಧೌಷದ ಮೊದಲಾದ ಹುಣ್ಣಿನ ನೋವಿಗೂ ಮೀರಿದ ನಾನಾ ವಿಧವಾದ ದಾರುಣವಾದ ಚಿಕಿತ್ಸೆಗಳಿಗೂ ತಮ್ಮ ದೇಹವನ್ನು ಒಪ್ಪಿಸಿಕೊಂಡರು. ಆ ಚಿಕಿತ್ಸೆಗಳಿಂದಲೂ ಏನೂ ಉಪಯೋಗವಿಲ್ಲವೆಂದು ಕಂಡುಬರಲು ಒಮ್ಮೆ ಭಕ್ತರಲ್ಲೊಬ್ಬರು ದುಃಖದಿಂದ ಭಗವಾನರನ್ನು ಮುಂದೇನು ಮಾಡುವುದೆಂದು ಕೇಳಲು ಭಗವಾನರು ಮುಗುಳುನಗುತ್ತ "ನಾನು ಇದಕ್ಕೆ ಯಾವುದಾದರೂ ಚಿಕಿತ್ಸೆ ಮಾಡಿ ಎಂದು ಎಂದಾದರೂ ಕೇಳಿದ್ದೇನೇ? ನನ್ನನ್ನು ಯಾವಾಗಲಾದರೂ ಮತ್ತು ಯಾರಾದರೂ ಕೇಳಿದ್ದರೆ ನಾನು ಮೊದಲಿನಿಂದಲೂ ಹೇಳುತ್ತ ಬಂದಿದ್ದಂತೆ ಇದಕ್ಕೆ ಯಾವ ಚಿಕಿತ್ಸೆಯೂ ಬೇಕಿಲ್ಲ; ಯಾವುದು ಹೇಗೆ ಆಗಬೇಕೋ ಹಾಗೆಯೇ ಆಗಲು ಬಿಟ್ಟುಬಿಡಿ ಎಂದೇ ಹೇಳುತ್ತಿದ್ದೆ" ಎಂದರು. ಪ್ರಾಸಂಗಿಕವಾಗಿ ಒಮ್ಮೆ, "ಯಾರಾದರೂ ಊಟವನ್ನು ಉಂಡ ನಂತರ ಆ ಎಲೆ ಅದೆಷ್ಟೇ ಚೆನ್ನಾಗಿರಲಿ ಅದನ್ನು ಕಾಪಾಡಲು ಯತ್ನಿಸುತ್ತಾರೇನು?" ಎಂದೂ, ಮತ್ತೊಮ್ಮೆ, "ಕೂಲಿಯು ತನ್ನ ತಲೆಯ ಮೇಲೆ ಹೊತ್ತಿರುವ ಭಾರವನ್ನು ಯಾವಾಗ ಕೆಳಗಿಳಿಸುತ್ತೇನೋ ಎಂದು ಕಾತರದಿಂದ ಎದುರು ನೋಡುತ್ತಿರುವಂತೆ ಜ್ಞಾನಿಯಾದವನೂ ಸಹ ತನ್ನ ಶರೀರವೆಂಬ ಹೊರೆಯನ್ನು ಎಂದಿಗೆ ಕಳೆದುಕೊಳ್ಳುವೆನೋ ಎಂಬುದಾಗಿ ಕಾತರದಿಂದ ಎದುರು ನೋಡುತ್ತಿರುತ್ತಾನೆ" ಎಂದೂ ಹೇಳಿದ್ದರು. ಅವರು ಪ್ರಾಣಾಂತಿಕವಾದ ನೋವಿನಿಂದ ನರಳುತ್ತ ತಮ್ಮ ಕೋಣೆಯಿಂದ ಹೊರಗೆ ಬರಲಾಗದಿದ್ದಾಗಲೂ ಸಹ ಎಂದಿನಂತೆಯೇ ಸದಾಕಾಲವೂ ಭಕ್ತರಿಗೆ ದರ್ಶನವನ್ನು ನೀಡುತ್ತಲೇ ಇದ್ದರು. ಹೀಗೆ ತಾವು ತಮ್ಮ ಜೀವನದಲ್ಲಿ ಸಾಕ್ಷಾತ್ಕರಿಸಿಕೊಂಡಿದ್ದ ಈ ದೇಹ ನಾನಲ್ಲ ಎಂಬ ಸತ್ಯಕ್ಕೆ ತಮ್ಮ ಜೀವನವನ್ನೇ ಪ್ರತ್ಯಕ್ಷ ಪ್ರಮಾಣವಾಗಿ ತೋರಿಸಿಕೊಟ್ಟರು.

ಇಂತಹ ಸ್ಥಿತಪ್ರಜ್ಞರಾದ ಮತ್ತು ಕರುಣಾಳುಗಳಾದ ಶ್ರೀ ರಮಣ ಮಹರ್ಷಿಗಳು 14ನೇ ಏಪ್ರಿಲ್ 1950 ಶುಕ್ರವಾರದ ದಿನ ದೇಹತ್ಯಾಗ ಮಾಡಿ ನಮ್ಮಿಂದ ಕಣ್ಮರೆಯಾದರು. ಆದರೂ ಅವರೇ ಅನೇಕ ಬಾರಿ

ಭಕ್ತರಿಗೆ "ಭಗವಾನರು ಹೊರಟುಹೋಗುತ್ತಿದ್ದಾರೆಂದು ಭಕ್ತರೆಲ್ಲರೂ ದುಃಖಿಸುತ್ತಿದ್ದಾರೆ; ಆದರೆ ಭಗವಾನರು ಎಲ್ಲಿಗೆ ಹೋಗಬಲ್ಲರು? ಮತ್ತು ಹೇಗೆ ಹೋಗಬಲ್ಲರು? ಅವರು ಇಲ್ಲಿಯೇ ಇರುತ್ತಾರೆ ಮತ್ತು ಎಂದೆಂದಿಗೂ ಇರುತ್ತಾರೆ" ಎಂದು ತಿಳಿಸಿಹೇಳುತ್ತಿದ್ದಂತೆ ಎಲ್ಲರ ಹೃದಯದಲ್ಲೂ ಆತ್ಮಸ್ವರೂಪರಾಗಿ ಎಂದೆಂದಿಗೂ ಬೆಳಗುತ್ತ ಭಕ್ತರಿಗೆ ಸದಾಕಾಲವೂ ಮಾರ್ಗದರ್ಶನವನ್ನು ನೀಡತ್ತಿದ್ದಾರೆ ಎನ್ನುವುದು ರಮಣಭಕ್ತರೆಲ್ಲರ ಅಂತರಂಗದ ಅನುಭವ.

## ಶ್ರೀಮತಿ ಸೂರಿ ನಾಗಮ್ಮನವರ ಸಂಕ್ಷಿಪ್ತ ಪರಿಚಯ

ಶ್ರೀಮತಿ ಸೂರಿ ನಾಗಮ್ಮನವರು 1902 ರ ಆಗಸ್ಟ್ ತಿಂಗಳಿನಲ್ಲಿ ಆಂಧ್ರಪ್ರದೇಶದ ಕೊಲನುಕೊಂಡವೆಂಬ ಸಣ್ಣ ಹಳ್ಳಿಯೊಂದರಲ್ಲಿ ಜನಿಸಿದರು. ಅವರಿಗೆ ಕೇವಲ ನಾಲ್ಕು ವರ್ಷ ವಯಸ್ಸಾಗಿದ್ದಾಗ ಅವರ ತಂದೆಯೂ, ಹತ್ತನೆಯ ವರ್ಷದಲ್ಲಿ ತಾಯಿಯೂ ತೀರಿಕೊಂಡರು. ಹನ್ನೊಂದನೆಯ ವರ್ಷದಲ್ಲಿ ಅವರಿಗೆ ಮದುವೆಯಾಯಿತು. ಪುರಾಣ ಕಾಲದ ಸಾಧ್ವಿಯರಂತೆ ಪತಿಸೇವೆಯಿಂದ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಇನ್ನೂ ಆಲೋಚಿಸುತ್ತಿರುವಾಗಲೇ ಒಂದೇ ವರ್ಷದೊಳಗೆ ಅವರ ಪತಿಯು ಸಿಡುಬಿನ ಖಾಯಿಲೆಯಿಂದ ನಿಧನರಾದರು. ಹೀಗೆ ನಾಗಮ್ಮನವರಿಗೆ ಹನ್ನೆರಡು ವರ್ಷ ತುಂಬುವುದರೊಳಗೇ ಅವರು ಒಂದಾದಮೇಲೊಂದರಂತೆ ದಾರುಣವಾದ ದುಃಖಪರಂಪರೆಗಳಿಗೆ ತುತ್ತಾದರು. ಇದರಿಂದ ಅವರು ಅತ್ಯಂತ ಹತಾಶರಾಗಿ ತಮ್ಮ ಮನೆಯ ಮಹಡಿಯ ಮೇಲಿದ್ದ ಕೋಣೆಯಿಂದ ಹೊರಗೇ ಬಾರದೆ ಬರಿಯ ಚಾಪೆಯನ್ನೇ ತಮ್ಮ ಹಾಸಿಗೆಯನ್ನಾಗಿಯೂ, ತಮ್ಮ ತೋಳುಗಳನ್ನೇ ತಲೆದಿಂಬನ್ನಾಗಿಯೂ ಮಾಡಿಕೊಂಡು ಮಲಗಿರುತ್ತ ಬಹಳ ದುಃಖದಿಂದ ಒಂಟಿಯಾಗಿ ಕಾಲವನ್ನು ಕಳೆಯುತ್ತಿದ್ದರು. ಹೀಗೆ ಅವರಿಗೆ ಅನೇಕ ತಿಂಗಳುಗಳು ಸೂರ್ಯನ ದರ್ಶನವಾಗದಿದ್ದ ಕಾರಣ ಅವರ ಆರೋಗ್ಯವು ತುಂಬಾ ಹದಗೆಟ್ಟಿತು.

ಸ್ವಲ್ಪ ಕಾಲದ ನಂತರ ಅವರು ತಮ್ಮ ದುಃಖವನ್ನು ಮರೆಯಲು ಅದೇ ಕೋಣೆಯಲ್ಲಿದ್ದ ತೆಲುಗು ಭಾಷೆಯ ಭಾರತ, ಪೋತನರ ಭಾಗವತ, ಭಗವದ್ಗೀತೆ ಮೊದಲಾದ ಗ್ರಂಥಗಳನ್ನು ಓದಲು ಮೊದಲುಮಾಡಿದರು. ಆಗಿನ ಕಾಲದಲ್ಲಿ ಅವರು ವಾಸವಾಗಿದ್ದ ಹಳ್ಳಿಯಲ್ಲಿ ಒಂದು ಪ್ರಾಥಮಿಕ ಶಾಲೆಯೂ ಇರಲಿಲ್ಲ; ಆದುದರಿಂದ ಅವರು ಚಿಕ್ಕಂದಿನಲ್ಲಿ ಹಿರಿಯರ ನೆರವಿನಿಂದ ತಮ್ಮ ಮಾತೃಭಾಷೆಯಾದ ತೆಲುಗಿನಲ್ಲಿ ಸ್ವಲ್ಪಮಟ್ಟಿಗೆ ಓದಿ ಬರೆಯಲು ಕಲಿತಿದ್ದರು. ಇಷ್ಟೇ ಭಾಷಾಜ್ಞಾನದಿಂದ ಅವರು ಈ ಗ್ರಂಥಗಳನ್ನು ಓದಿ ಮನನ ಮಾಡುತ್ತಾ ಬಂದರು. ಕ್ರಮೇಣ ಅವರ ಮನಸ್ಸು ಭಗವಂತನೆಡೆಗೆ ಹರಿಯಲು ಮೊದಲಾಯಿತು.

ನಾಗಮ್ಮನವರು 1913 ರಲ್ಲಿ ಒಂದು ದಿವಸ ಭಾಗವತದಲ್ಲಿ ಕಪಿಲ ಮಹರ್ಷಿಗಳು ತಮ್ಮ ತಾಯಿಯಾದ ದೇವಹೂತಿಗೆ ತತ್ತ್ವೋಪದೇಶವನ್ನು ಮಾಡಿದ ಪ್ರಕರಣವನ್ನು ಅನೇಕಾವರ್ತಿ ಓದಿ ತಮಗೂ ಹಾಗೆಯೇ ಮಾರ್ಗ ದರ್ಶನವನ್ನು ಮಾಡುವ ಮಹಾಪುರುಷರನ್ನು ದೊರಕಿಸಿಕೊಡಬೇಕೆಂದು ಭಗವಂತನಲ್ಲಿ ದೈನ್ಯದಿಂದ ಮೊರೆಯಿಡುತ್ತಾ ಹಾಗೆಯೇ ನಿದ್ರೆಮಾಡಿದರು. ಆಗ ಅವರಿಗೆ ಕನಸಿನಲ್ಲಿ ಸುಮಾರು ಮೂರಡಿ ಎತ್ತರದ ಪೀಠವೊಂದರ ಮೇಲೆ ಮಹಾಪುರುಷರೊಬ್ಬರು ಪದ್ಮಾಸನದಲ್ಲಿ ದಕ್ಷಿಣಾಮೂರ್ತಿಯಂತೆ ಮೌನ ಮುದ್ರೆಯನ್ನು ಧರಿಸಿ ಕುಳಿತಿರುವಂತೆ ಕಂಡಿತು. ಆ ಮಹಾಪುರುಷರ ಸುತ್ತಲೂ ಪ್ರಭಾವಳಿಯು ಆವರಿಸಿತ್ತು. ಈ ದರ್ಶನದಿಂದ ಅವರು ಆನಂದ ಪುಲಕಿತರಾಗಿ ಆ ಮಹಾಪುರುಷರಿಗೆ ಪ್ರಣಾಮವನ್ನು ಸಲ್ಲಿಸಲು ಮೇಲೇಳು ತ್ತಿರುವಾಗ ನಿದ್ರಾಭಂಗವಾಯಿತು. ಅಂದುಮೊದಲು ಅವರು ಭಗವಂತನನ್ನು ಅಂತಹ ಸದ್ಗುರುವನ್ನು ತೋರುವಂತೆ ಅನುಗ್ರಹಿಸಬೇಕೆಂದು ಎಡೆಬಿಡದೇ ಪ್ರಾರ್ಥಿಸಲು ಮೊದಲುಮಾಡಿದರು.

ಕಾಲಕ್ರಮೇಣ ಅವರು ತಮ್ಮ ಏಕಾಂತವಾಸವನ್ನು ತ್ಯಜಿಸಿ ಮನೆ ಯವರೊಡನೆ ಬೆರತು ಎಲ್ಲಾ ಮನೆಗೆಲಸಗಳಲ್ಲಿ ನೆರವಾಗತೊಡಗಿದರು. ಬಿಡುವಿದ್ದಾಗ ನೆರೆಹೊರೆಯವರಿಗೆ, ಕಷ್ಟದಲ್ಲಿರುವವರಿಗೆ ಮತ್ತು ರೋಗಿಗಳಿಗೆ ತಮ್ಮ ಕೈಲಾದ ಸಹಾಯವನ್ನು ಮಾಡುತ್ತಿದ್ದರು. ಹೀಗೆ ಅನೇಕ ವರ್ಷಗಳು ಉರುಳಿದುವು. ಆದರೂ ಅವರ ಹೃದಯದ ಅಶಾಂತಿಯು ಕಡಿಮೆಯಾಗಲಿಲ್ಲ. ಹೀಗಾಗಿ ಅವರು 1940 ರಲ್ಲಿ ಖಾಯಿಲೆಬಿದ್ದರು. ಯಾವ ಔಷಧೋಪಚಾರ ಗಳಿಂದಲೂ ಏನೂ ಗುಣವಾಗಲಿಲ್ಲ. ತಜ್ಞವೈದ್ಯರುಗಳು ಅವರನ್ನು ಪರೀಕ್ಷಿಸಿ ಇದು ಕೇವಲ ಮನೋರೋಗವೆಂದೂ ಇದನ್ನು ಅವರೇ ಸ್ವತಃ ನಿವಾರಿಸಿ ಕೊಳ್ಳಬೇಕೆಂದೂ ಅಭಿಪ್ರಾಯಪಟ್ಟರು. ಆಗ ಅವರು ತಮ್ಮ ಅಣ್ಣಂದಿರ ಸಲಹೆಯ ಮೇರೆಗೆ ತೀರ್ಥಕ್ಷೇತ್ರಗಳ ಪರ್ಯಟನೆ ಮಾಡಿ ಮತ್ತೆ ಮನೆಗೆ ಹಿಂದಿರುಗಿಬಂದರು. ಆದರೆ ಇವಾವುಗಳಿಂದಲೂ ಅವರಿಗೆ ಶಾಂತಿ ಮತ್ತು ಸಮಾಧಾನಗಳು ದೊರಕಲಿಲ್ಲ.

ಅವರು ಇಂತಹ ಮಾನಸಿಕ ತೊಳಲಾಟದಲ್ಲಿರುವಾಗಲೇ ಅವರ ಎರಡ ನೆಯ ಅಣ್ಣ ಶ್ರೀ ಡಿ. ಎಸ್. ಶಾಸ್ತ್ರಿಗಳಿಗೆ ಎರ್ನಾಕುಲಂ ಸೆಂಟ್ರಲ್

ಬ್ಯಾಂಕಿನಿಂದ ಅಹಮ್ಮದಾಬಾದಿನ ಶಾಖೆಗೆ ವರ್ಗವಾಯಿತು. ಆಗ ಶಾಸ್ತ್ರಿ ಗಳು ತಮ್ಮ ಸಂಸಾರಸಮೇತ ದಕ್ಷಿಣದೇಶದ ತೀರ್ಥಯಾತ್ರೆಗೆ ಹೋಗಿ ಸಂದರ್ಭದಲ್ಲಿ ತಿರುವಣ್ಣಾಮಲೆಗೂ ಹೋಗಿದ್ದು ಅಲ್ಲಿ ವಾಸವಾಗಿದ್ದ ಭಗವಾ ಶ್ರೀ ರಮಣಮಹರ್ಷಿಗಳ ದರ್ಶನವನ್ನು ಮಾಡಿದರು. ನಂತರ ಅವರ ಅಹಮ್ಮದಾಬಾದನ್ನು ತಲುಪಿ ತಮ್ಮ ಸೋದರಿಗೆ ಪತ್ರವೊಂದನ್ನು ಬರೆದ ಅದರಲ್ಲಿ ಆಕೆಯು ಭಗವಾನ್ ಶ್ರೀ ರಮಣ ಮಹರ್ಷಿಗಳನ್ನು ದರ್ಶನ ಮಾ ಬೇಕೆಂದು ಸಲಹೆ ಮಾಡಿದರು. ಆ ಸಲಹೆಯಂತೆ ನಾಗಮ್ಮನವರು 1941 ನೆ ಜುಲೈ ತಿಂಗಳಿನಲ್ಲಿ ಪ್ರಥಮಬಾರಿಗೆ ಒಬ್ಬರೇ ತಿರುವಣ್ಣಾಮಲೆಗೆ ಬಂದ ಭಗವಾನರ ದರ್ಶನವನ್ನು ಮಾಡಿದರು. ಅವರು ಭಗವಾನರನ್ನು ಮೊದ ಬಾರಿಗೆ ದರ್ಶಿಸಿದ ಕೂಡಲೇ ಇವರೇ ತಮಗೆ ಕನಸಿನಲ್ಲಿ ಕಾಣಿಸಿಕೊಂಡಿ ಮಹಾಪುರುಷರೆಂಬ ದೃಢವಾದ ನಂಬಿಕೆ ಉಂಟಾಯಿತು. ಕೊನೆಗೂ ತಮ ಸದ್ಗುರುವೊಬ್ಬರು ದೊರಕಿದರೆಂದು ತಿಳಿದು ಬಹಳವಾಗಿ ಆನಂದಿಸಿದರು ಆದರೆ ಅವರು ಅಲ್ಲಿ ಕೇವಲ ಮೂರೇ ವಾರಗಳು ನಿಲ್ಲಲು ಏರ್ಪಾಡುಮಾ ಕೊಂಡು ಬಂದಿದ್ದಕಾರಣ ಅನಿವಾರ್ಯವಾಗಿ ಮತ್ತೆ ಹಿಂದಿರುಗಬೇಕಾಗಿತ್ತು ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ಇಂತಹ ಮಹಾಪುರುಷರ ದರ್ಶ ಕ್ಕಾಗಿಯೇ ಹಂಬಲಿಸಿಬಂದು ಈಗ ಮತ್ತೆ ಮನೆಗೆ ಹಿಂದಿರುಗಿ ಹೋಗಬೇಕಾ ಬಂದದ್ದರಿಂದ ಅವರಿಗೆ ಸಹಿಸಲಸಾಧ್ಯವಾದ ದುಃಖವಾಯಿತು. ಆಗ ಅವರ ಮತ್ತೆ ತಿರುವಣ್ಣಾಮಲೆಗೇ ಹಿಂದಿರುಗಿ ಬರುವಂತೆ ಅನುಗ್ರಹಿಸಬೇಕೆಂದ ಭಗವಾನರಿಗೆ ಮನಸ್ಸಿನಲ್ಲೇ ಪ್ರಾರ್ಥನೆಯನ್ನು ಸಲ್ಲಿಸಿ ನಮಸ್ಕರಿಸಿ ಸಂಜ್ಞಾ ಸೂಚಕವಾದ ಭಗವಾನರ ಅನುಮತಿಯನ್ನು ಹೊಂದಿ ಹಿಂದಿರುಗಲು ಗಾಡಿ ಯನ್ನು ಹತ್ತಿದರು. ಆಗ ಅವರಿಗೆ ಅತ್ಯಾಶ್ಚರ್ಯಕರವಾದ ಒಂದು ಅನುಭವ ವಾಯಿತು. ದುಃಖದಿಂದ ಆಶ್ರಮವನ್ನು ಬಿಟ್ಟು ಹಿಂದಿರುಗುತ್ತಿರುವಾ ಧಾರಾಕಾರವಾಗಿ ಕಣ್ಣುಗಳಿಂದ ಸುರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಳ್ಳುತ್ತ ಕುಳಿತಿದ್ದ ಗಾಡಿಯಿಂದ ಹೊರಗೆ ಕಣ್ಣುಹಾಯಿಸಲು ಅವರಿಗೆ ಭಗವಾನ ಮಂದಸ್ಮಿತ ವದನವೇ ಎಲ್ಲೆಡೆಯಲ್ಲೂ ಕಾಣಿಸಲು ಮೊದಲಾಯಿತು. ಕಣ್ಣು ಗಳನ್ನು ಮುಚ್ಚಿಕೊಂಡರೂ ಸಹ ಆ ಸುಂದರ ವದನಾರವಿಂದವು ಕಾಣಿಸು ತ್ತಲೇ ಇತ್ತು. ಅರುಣಾಚಲೇಶ್ವರ ದೇವಾಲಯದ ಬಳಿ ಗಾಡಿಯು ಬಂದಾಗ

ದೇವಾಲಯದ ಗೋಪುರವನ್ನು ನೋಡಲು ಕಣ್ಣುಗಳನ್ನು ಬಿಟ್ಟರೆ ಅಲ್ಲೂ ಸಹ ಭಗವಾನರೇ ಅವರ ಕಣ್ಣಿಗೆ ಕಾಣಿಸುತ್ತಿದ್ದಾರೆ! ಇದೇ ಸ್ಥಿತಿಯಲ್ಲಿ ಅವರು ರೈಲು ಡಬ್ಬಿಯೊಳಗೆ ಕುಳಿತುಕೊಂಡು ಸುತ್ತಲೂ ಕಣ್ಣುಹಾಯಿಸಿದರೆ ಅಲ್ಲೂ ಸಹ ಭಗವಾನರೇ! ಅಲ್ಲದೇ ದಾರಿಯುದ್ದಕ್ಕೂ ಭಗವಾನರು ತಮ್ಮ ಬಳಿಯೇ ಇರುವಂತೆಯೇ ಅನುಭವ. ಇಂತಹ ಮಾನಸಿಕ ಸ್ಥಿತಿಯಲ್ಲಿ ಅವರು ಊರು ತಲುಪಿ ಭಗವಾನರ ಬಳಿಯೇ ಶಾಶ್ವತವಾಗಿ ಉಳಿಯಲು ಬೇಕಾದ ಎಲ್ಲ ವ್ಯವಸ್ಥೆಯನ್ನೂ ಮಾಡಿಕೊಂಡು 1941ರ ನವೆಂಬರ್ ತಿಂಗಳಿನಲ್ಲಿ ಮರಳಿ ತಿರುವಣ್ಣಾಮಲೆಗೇ ಬಂದು 1950 ರಲ್ಲಿ ಭಗವಾನರ ಸಮಾಧಿಯಾಗುವವರೆಗೂ ಅಲ್ಲಿಯೇ ನೆಲೆಸಿದರು.

ನಾಗಮ್ಮನವರು ಆಶ್ರಮದ ಹತ್ತಿರವೇ ವಾಸಿಸಲು ಮನೆಯೊಂದನ್ನು ಗೊತ್ತುಮಾಡಿಕೊಂಡು ಊಟೋಪಚಾರಗಳಿಗೆ ಮಾತ್ರವೇ ಅಲ್ಲಿಗೆ ಹೋಗಿ ಬರುತ್ತ ಉಳಿದೆಲ್ಲ ಸಮಯವನ್ನೂ ಭಗವಾನರ ಸನ್ನಿಧಿಯಲ್ಲೇ ಕಳೆಯುತ್ತಿದ್ದರು. ಅವರು ಭಗವಾನರ ಸನ್ನಿಧಿಯಲ್ಲಿ ಪ್ರತಿನಿತ್ಯವೂ ನಡೆಯುತ್ತಿದ್ದ ವಿಶೇಷವಾದ ಅನೇಕ ಘಟನೆಗಳನ್ನು ನೋಡುತ್ತ ಮತ್ತು ಅಲ್ಲಿಗೆ ಬರುತ್ತಿದ್ದ ಭಕ್ತರು ಕೇಳುತ್ತಿದ್ದ ನಾನಾವಿಧವಾದ ಪ್ರಶ್ನೆಗಳಿಗೆ ಭಗವಾನರು ಕೊಡುತ್ತಿದ್ದ ಬೋಧಪ್ರದವಾದ ಉತ್ತರಗಳನ್ನು ಬಹಳ ಗಮನವಿಟ್ಟು ಆಲಿಸುತ್ತಿದ್ದರು. 1945 ರಲ್ಲಿ ಒಮ್ಮೆ ಅವರಣ್ಣ ಶ್ರೀ ಡಿ. ಎಸ್. ಶಾಸ್ತ್ರಿಗಳು ಆಶ್ರಮಕ್ಕೆ ಬಂದಿದ್ದಾಗ ನಾಗಮ್ಮನವರು ಅಣ್ಣನೊಡನೆ ಭಗವಾನರ ಸನ್ನಿಧಿಯಲ್ಲಿ ಜರುಗುತ್ತಿದ್ದ ಅನೇಕ ಘಟನೆಗಳನ್ನೂ ಅಧ್ಯಾತ್ಮಪಿಪಾಸುಗಳಾದ ಭಕ್ತರ ಪ್ರಶ್ನೆಗಳಿಗೆ ಭಗವಾನರು ನೀಡುತ್ತಿದ್ದ ಉಪದೇಶಗಳನ್ನೂ ಉತ್ಸಾಹದಿಂದ ವಿವರಿಸಿದರು. ಇದನ್ನು ಆಲಿಸಿದ ಶಾಸ್ತ್ರಿಗಳು ಇಂತಹ ವಿಶೇಷ ಘಟನೆಗಳನ್ನು ತಮಗೆ ಪತ್ರರೂಪದಲ್ಲಿ ಬರೆಯಬೇಕೆಂದೂ, ಇದೂ ಸಹ ಅಧ್ಯಾತ್ಮ ಸಾಧನೆಯೆಂದು ಪರಿಗಣಿಸಬೇಕೆಂದೂ ತಿಳಿಸಿ ಅದಕ್ಕೆ ಬೇಕಾದ ಲೇಖನ ಸಾಮಗ್ರಿಗಳನ್ನು ಕೊಟ್ಟು ತಮ್ಮ ಮನೆಗೆ ಹಿಂದಿರುಗಿದರು. ಹೀಗೆ ತಮ್ಮ ಅಣ್ಣನ ಆಗ್ರಹದ ಸಲಹೆಯ ಮೇರೆಗೆ ನಾಗಮ್ಮನವರು 'ಶ್ರೀ ರಮಣಾಶ್ರಮ ಲೇಖಲು' ಎಂಬ ಈ ಪತ್ರಗಳ ರಚನೆಯನ್ನು ಪ್ರಾರಂಭಿಸಿದರು. ಈ ಪತ್ರಗಳಲ್ಲಿ ಕೆಲವು 'ನವೋದಯ'ವೆಂಬ ತೆಲುಗು ಪತ್ರಿಕೆಯಲ್ಲಿ ಪ್ರಕಟವಾದುವು.

*

ಪ್ರಖ್ಯಾತ ವಿದ್ವಾಂಸರಾದ ವೇಲೂರಿ ಶಿವರಾಮ ಶಾಸ್ತ್ರಿಗಳು ಇವುಗಳ
ಓದಿ, ಸಂತೋಷದಿಂದ ಕೂಡಲೇ ನಾಗಮ್ಮನವರಿಗೆ ಪತ್ರವೊಂದನ್ನು ಬ
ನಾಗಮ್ಮನವರು ಭಗವಾನರ ವಚನಾಮೃತವನ್ನು ಪ್ರಪಂಚದ ಎಲ್ಲ ಸೊ
ಸೋದರಿಯರಿಗೆ ಹಂಚುವುದಕ್ಕಾಗಿಯೇ ಆಶ್ರಮದಲ್ಲಿ ವಾಸವಾಗಿ
ರೆಂದು ಭಾವಿಸಿ ಈ ಪತ್ರರಚನೆಯ ಕಾರ್ಯವನ್ನು ಬಿಡದೆ ಮುಂದುವ
ಕೊಂಡು ಬರಬೇಕೆಂದು ಸಲಹೆಯನ್ನಿತ್ತರು. ಇದೇ ಬಗೆಯ ಇ
ಅನೇಕ ಭಕ್ತರುಗಳ ಅಪೇಕ್ಷೆಯಂತೆ ನಾಗಮ್ಮನವರು ಈ ಲೇಖಾರಚನೆಯ
21-11-1945 ರಲ್ಲಿ ಆರಂಭಿಸಿ 14-4-1950 ಭಗವಾನರ ಮ
ಸಮಾಧಿಯಾಗುವವರೆಗೆ ಈ ಲೇಖಾರಚನೆಗೆ ಅನೇಕ ವಿಧವಾದ ಅಡ್ಡಿ ಆ
ಗಳು ಬಂದರೂ ಧೃತಿಗೆಡದೆ ಮುಂದುವರಿಸಿಕೊಂಡು ಬಂದರು. ಭಗವಾನ
ಸಹ ಅನೇಕ ಸಂದರ್ಭಗಳಲ್ಲಿ ಸೂಚ್ಯವಾಗಿ ನಾಗಮ್ಮನು ವಾಚಕವೃಂ
'ವಿಷಯದಾನ'ವನ್ನು ಮಾಡುತ್ತಿದ್ದಾಳೆಂದು ತಿಳಿಸುತ್ತ ಅನೇಕ
ಭಕ್ತರು ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರಗಳನ್ನು ನೀಡುವ ಮೊ
ಸಭಾಂಗಣದಲ್ಲಿ ಒಮ್ಮೆ ಕಣ್ಣುಹಾಯಿಸಿ 'ನಾಗಮ್ಮ ಎದಿ?' ಎಂ
ಆ ಸಂದರ್ಭದಲ್ಲಿ ನಾಗಮ್ಮನವರು ಅಲ್ಲಿ ಇಲ್ಲದಿದ್ದರೆ ಮರುದಿನ ಬಂ
"ನಿನ್ನೆ ಅವರು ಈ ಪ್ರಶ್ನೆ ಕೇಳಿದರು; ಅದಕ್ಕೆ ನಾನು ಹೀಗೆ ಉ
ಕೊಟ್ಟೆ" ಎಂದು ಹೇಳುತ್ತ ಈ ಲೇಖಾರಚನೆಗೆ ತಮ್ಮ ಪ್ರೋತ್ಸಾಹ
ಯೆಂದು ಸೂಚಿಸುತ್ತಿದ್ದರು. ಈ 'ಲೇಖಲು'ವಿನ ಮೊದಲನೆಯ ಭ
1947 ರಲ್ಲಿ ಭಗವಾನರ ಸ್ವರ್ಣೋತ್ಸವ ಜಯಂತಿಯ ಸಂದರ್ಭ
ಪ್ರಕಟವಾಗಿ ಭಗವಾನರ ಸನ್ನಿಧಿಯಲ್ಲೇ ಅದರಲ್ಲಿದ್ದ 75 ಪತ್ರಗಳ
ಓದಲಾಯಿತು. ಇವುಗಳನ್ನು ಓದುತ್ತಿರುವಾಗ ಭಗವಾನರು ತಮ್ಮ ನೆನ
ಬಂದ ಇನ್ನೂ ಅನೇಕ ಹೊಸ ವಿಷಯಗಳನ್ನು ತಿಳಿಸಿದರು. ಈ ಹ
ವಿಷಯಗಳನ್ನೂ ಒಳಗೊಂಡು 'ಲೇಖಲು'ವಿನ ಮೊದಲನೆಯ ಭಾ
ಪುನರ್ಮುದ್ರಣ 1955 ರಲ್ಲಿ ಹೊರಬಂದಿತು. ಇದರ ಎರಡನೆಯ ಭ
1953 ರಲ್ಲೂ, ಮೂರನೆಯದು 1958ರಲ್ಲೂ ನಾಲ್ಕು ಮತ್ತು ಐದನೆಯ
1964 ರಲ್ಲೂ ಪ್ರಕಟವಾದುವು. ಈ ಐದು ಭಾಗಗಳನ್ನೂ ಒಟ್ಟುಗೂ
ಒಂದೇ ಪುಸ್ತಕವಾಗಿ 1979 ರ ಜನವರಿಯಲ್ಲಿ ಶ್ರೀ ರಮಣಾಶ್ರಮದವರ

ಪ್ರಕಟಗೊಂಡಿದೆ. ಇದರಲ್ಲಿ ಒಟ್ಟು 273 ಪತ್ರಗಳಿವೆ. ಇದರ ಆಂಗ್ಲ ಅನುವಾದವನ್ನು ನಾಗಮ್ಮನವರ ಅಣ್ಣ ಶ್ರೀ ಶಾಸ್ತ್ರಿಗಳೇ ಮಾಡಿದ್ದಾರೆ. ಇದು 'Letters from Sri Ramanasramam' ಎಂಬ ಹೆಸರಿನಿಂದ ಜಗದ್ವಿಖ್ಯಾತವಾಗಿದೆ. ನಾಗಮ್ಮನವರು ತಮ್ಮ ಈ ಲೇಖಾರಚನೆಯ ಕೆಲಸ ದೊಂದಿಗೆ ಭಕ್ತರು ಭಗವಾನರಿಗೆ ಅರ್ಪಿಸುತ್ತಿದ್ದ ತೆಲುಗು ಸ್ತೋತ್ರಗಳ ಪ್ರತಿ ಗಳನ್ನು ಮಾಡುವುದು, ಆಶ್ರಮದಿಂದ ಪ್ರಕಟವಾಗುತ್ತಿದ್ದ ತೆಲುಗು ಪುಸ್ತಕಗಳ ಅಚ್ಚಿನ ಕರಡು ಪ್ರತಿಗಳನ್ನು ತಿದ್ದುವುದು, ಕೆಲವೊಮ್ಮೆ ಆಶ್ರಮದ ಗ್ರಂಥಾ-ಲಯದಲ್ಲಿ ಹೆಚ್ಚಿನ ಕೆಲಸವಿರುವಾಗ ಸಹಾಯ ಮಾಡುವುದು ಮತ್ತು ವಿಶೇಷ ಸಂದರ್ಭಗಳಲ್ಲಿ ಆಶ್ರಮದ ಸ್ವಯಂಸೇವಕಿಯಾಗಿ ಕೆಲಸಮಾಡುವುದು ಮೊದ ಲಾದ ಆಶ್ರಮದ ಅನೇಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ಏಪ್ರಿಲ್ 14ನೇ 1950 ರಲ್ಲಿ ಭಗವಾನರ ಮಹಾಸಮಾಧಿಯಾದ ನಂತರವೂ ನಾಗಮ್ಮನವರು ತಿರುವಣ್ಣಾಮಲೆಯಲ್ಲೇ ವಾಸಿಸುತ್ತಿದ್ದರು. ನಂತರ ಅವರ ಆರೋಗ್ಯವು ಕೆಟ್ಟುಹೋದ ಕಾರಣ ಮದ್ರಾಸಿಗೆ ಹೋಗಿ ಚಿಕಿತ್ಸೆ ಪಡೆದು ಗುಣಮುಖರಾದ ನಂತರ 1953ನೇ ಸೆಪ್ಟೆಂಬರ್‌ನಲ್ಲಿ ಕಾಶಿ, ರಾಮೇಶ್ವರ ಮೊದಲಾದ ಪುಣ್ಯಕ್ಷೇತ್ರಗಳ ಯಾತ್ರೆಗೆ ಹೋಗಿ ಮರಳಿದ ನಂತರ 1954 ರಲ್ಲಿ ತಮ್ಮ ಹುಟ್ಟೂರಾದ ಕೊಲನುಕೊಂಡದಲ್ಲಿ ಕೆಲಕಾಲ ವಾಸಿಸುತ್ತಿದ್ದು ನಂತರ ವಿಜಯವಾಡದಲ್ಲಿ ಅವರ ಅಣ್ಣನವರು ಕಟ್ಟಿಸಿಕೊಟ್ಟ 'ಶ್ರೀ ರಮಣಸದನ' ಎನ್ನುವ ಹೊಸಮನೆಯಲ್ಲಿ ವಾಸಿಸುತ್ತಿದ್ದರು. ಅಲ್ಲಿ ಅವರು ಭಗವಾನರ ಛಾಯಾಚಿತ್ರವೊಂದನ್ನು ಪ್ರತಿಷ್ಠೆ ಮಾಡಿ ಪ್ರತಿನಿತ್ಯವೂ 'ಶ್ರೀ ರಮಣಚತ್ವಾರಿಂಶತ್', 'ಶ್ರೀ ರಮಣಾಷ್ಟೋತ್ತರ ನಾಮಾವಳಿ', ಭಗವಾನರ 'ಉಪದೇಶಸಾರ' ಮುಂತಾದ ಕೃತಿಗಳ ನಿತ್ಯಪಾರಾಯಣ ವನ್ನು ಮಾಡುತ್ತಲೂ ಭಗವಾನರ ಚರಿತ್ರೆಯನ್ನು ಓದಿ ಅವರ ವಿಷಯವಾಗಿ ಇನ್ನೂ ಹೆಚ್ಚು ವಿವರಗಳನ್ನು ಅರಿಯಲು ಬರುತ್ತಿದ್ದ ಭಕ್ತರೊಡನೆ ಸತ್ಸಂಗದಲ್ಲಿ ಭಗವಾನರ ಜೀವಿತಕ್ಕೆ ಸಂಬಂಧಿಸಿದ ಅನೇಕ ವಿಷಯ ಗಳನ್ನು ವಿವರಿಸುತ್ತಲೂ ಮತ್ತು ಧ್ಯಾನ ಪೂಜೆಗಳಲ್ಲಿ ತಮ್ಮ ಕಾಲವನ್ನು ವಿನಿಯೋಗಿಸುತ್ತಲೂ ಇದ್ದರು. 1976 ರಲ್ಲಿ ಅವರಿಗೆ ಕ್ಯಾನ್ಸರ್ ಖಾಯಿಲೆಯು ತಲೆದೋರಿ ಅದಕ್ಕೆ ಶಸ್ತ್ರಚಿಕಿತ್ಸೆಯು ಫಲಕಾರಿಯಾಗ



ಕಾರ್ಯದರ್ಶಿಯವರ ಕೋರಿಕೆಯ ಮೇರೆಗೆ ಭಾರತೀಯ ವಿದ್ಯಾಭವನ ದಲ್ಲಿ 20-11-76 ರಲ್ಲಿ 'ಶ್ರೀ ರಮಣಾಶ್ರಮ ಸ್ಮೃತುಲು' ಎಂಬ ಭಾಷಣಮಾಲಿಕೆಯನ್ನು ಮೊದಲುಮಾಡಿದರು. ಈ ಭಾಷಣಗಳ ಮಾಲಿಕೆ ಯಲ್ಲಿ ಅವರು ಭಗವಾನರ ವಿಷಯವಾಗಿ ತಮ್ಮ ಅನೇಕ ನೆನಪುಗಳನ್ನು ಶ್ರೋತೃಗಳಲ್ಲಿ ಹಂಚಿಕೊಂಡರು. ಈ ವಿಷಯಗಳೆಲ್ಲವನ್ನೊಳಗೊಂಡ ಪುಸ್ತಕ ವನ್ನು ಶ್ರೀ ರಮಣಾಶ್ರಮದವರು 1978ರಲ್ಲೂ ನಾಗಮ್ಮನವರ ಇನ್ನೊಂದು ಕೃತಿಯಾದ 'ನಾ ರಮಣಾಶ್ರಮ ಜೀವಿತಮು' ಮತ್ತು ಇದರ ಆಂಗ್ಲ ಅನುವಾದವಾದ 'My Life at Ramanasramam' ಎಂಬ ಪುಸ್ತಕ ವನ್ನೂ 1980 ರ ಜನವರಿಯಲ್ಲಿ ಭಗವಾನರ ಜನ್ಮಶತಾಬ್ಧಿ ಸಂದರ್ಭದಲ್ಲಿ ಅವರ 'ಶ್ರೀ ರಮಣ ಕರುಣಾ ವಿಲಾಸಮು' ಎಂಬ ಗ್ರಂಥದೊಡನೆ ಪ್ರಕಟಿಸಿದರು.

1977 ರ ಜನವರಿಯಲ್ಲಿ ನಾಗಮ್ಮನವರ ಎಡ ಭುಜದ ಹಿಂದೆ ಒಂದು ಗೆಡ್ಡೆ ಕಾಣಿಸಿಕೊಂಡಿತು. ಅದು ಅಂತಿಮವಾಗಿ ಕ್ಯಾನ್ಸರ್ ಎಂದು ನಿರ್ಣಯವಾಗಿ ಆ ಪರಿಸ್ಥಿತಿಯಲ್ಲಿ ಶಸ್ತ್ರಚಿಕಿತ್ಸೆ ಸಾಧ್ಯವಾಗದ ಕಾರಣ ಕೋಬಾಲ್ಟ್ ಚಿಕಿತ್ಸೆಯನ್ನೇ ಮಾಡಲಾಯಿತು. ಪರಿಸ್ಥಿತಿ ಸುಧಾರಿಸಲಿಲ್ಲ ವಾದಕಾರಣ ವೈದ್ಯರು ಇನ್ನು ಏನೂ ಪ್ರಯೋಜನವಿಲ್ಲವೆಂದು ಭಾವಿಸಿ ಚಿಕಿತ್ಸೆಯನ್ನೇ ನಿಲ್ಲಿಸಿಬಿಟ್ಟರು. ಆದರೆ ಭಗವಾನರ ಇಚ್ಛೆಯಂತೆ ಭಗವಾನರ ಭಕ್ತರೊಬ್ಬರು ಹೋಮಿಯೋಪತಿ ಚಿಕಿತ್ಸೆಯನ್ನು ತಾವಾಗಿಯೇ ಕೈಗೊಂಡರು. ಆಗ ಆಶ್ಚರ್ಯವೆಂಬಂತೆ ನೋವೂ ಕಡಿಮೆಯಾಗುತ್ತ ಬಂದು ಕ್ರಮೇಣ ಮೇ, ಜೂನ್ ತಿಂಗಳಲ್ಲಿ ಆ ಗೆಡ್ಡೆ ಕರಗಿ ನಾಗಮ್ಮನವರು ಕುತ್ತಿಗೆ ಯನ್ನೂ ಸಹ ಅತ್ತಿತ್ತ ಚಲಿಸುವಂತಾಯಿತು. ಇದನ್ನು ಕಂಡ ತಜ್ಞವೈದ್ಯ ರಿಗೂ ಸಹ ಅಚ್ಚರಿಯೇ!

'ಶ್ರೀ ರಾಮಕೃಷ್ಣ ವಚನವೇದ' ಎಂದು ಪ್ರಸಿದ್ಧವಾಗಿರುವ

ದೈನಂದಿನ ಘಟನೆಗಳ ಮತ್ತು ಭಗವಾನರ ಸಂಭಾಷಣೆಗಳ ಮೂಲಕ ಹೃದಯಂಗಮವಾಗಿ ಚಿತ್ರಿಸಿರುವ ಭಕ್ತಶಿರೋಮಣಿ ಶ್ರೀಮತಿ ಸೂರಿ ನಾಗಮ್ಮನವರು 31–3–80ನೆಯ ಚೈತ್ರ ಶುದ್ಧ ಹುಣ್ಣಿಮೆ ಶ್ರೀ ರಾಮಚಂದ್ರ ಪ್ರಭುವಿನ ಭಕ್ತಶ್ರೇಷ್ಠ ಆಂಜನೇಯ ಸ್ವಾಮಿಯ ಜಯಂತಿಯ ಪುಣ್ಯದಿನದಂದು ಶರೀರತ್ಯಾಗಮಾಡಿ ಶ್ರೀ ರಮಣ ಭಗವಾನರ ಪಾದಾರವಿಂದ ಗಳಲ್ಲಿ ಐಕ್ಯರಾದರು.

ಶ್ರೀ ರಮಣಾಶ್ರಮ
30–9–47

## ಮೌನಮುದ್ರೆ

ಅಣ್ಣಾ,

ಇಂದು ಮಧ್ಯಾಹ್ನ ಮೂರು ಗಂಟೆಯ ಸಮಯಕ್ಕೆ ಭಗವಾನರ ಸನ್ನಿಧಿಗೆ ಹೋದೆ. ಆ ಸಮಯದಲ್ಲಿ ಆತ್ಮೀಯವಾದ ಮಾತುಕತೆಗಳು ಜರುಗುತ್ತಿದ್ದುವು. ಪ್ರಾಸಂಗಿಕವಾಗಿ ಭಗವಾನರು "ಶ್ರೀ ಶಂಕರಾಚಾರ್ಯರು ದಕ್ಷಿಣಾಮೂರ್ತಿಯ ಅಷ್ಟಕವನ್ನು ಮೂರು ಭಾಗಗಳಾಗಿ ವಿಂಗಡಿಸಿ ಬರೆದರು" ಎಂದು ಹಿಂದೆ ತಿಳಿಸಿದಂತೆಯೇ ತಿಳಿಸಿ, 'ಶಂಕರಾಚಾರ್ಯರು ದಕ್ಷಿಣಾಮೂರ್ತಿಯನ್ನು ಸ್ತುತಿಸಲು ಇಚ್ಛಿಸಿದರು. ಆದರೆ ಮೌನಸ್ವರೂಪನಾಗಿರುವವನನ್ನು ಯಾವ ಬಗೆಯಾಗಿ ಸ್ತುತಿಸಲು ಸಾಧ್ಯ? ಆದಕಾರಣವೇ ಸೃಷ್ಟಿ, ಸ್ಥಿತಿ, ಲಯ ಎಂಬುದಾಗಿ ವಿಭಜಿಸಿ ತಿಳಿಸಿಹೇಳಿ ಇವುಗಳೆಲ್ಲಕ್ಕಿಂತಲೂ ವಿಲಕ್ಷಣಸ್ವರೂಪನಾದ ದಕ್ಷಿಣಾಮೂರ್ತಿಗೆ ನಮಸ್ಕರಿಸುತ್ತೇನೆ' ಎಂದು ತಿಳಿಸಿದ್ದಾರೆ. ಇದು ಬಿಟ್ಟು ಬೇರೆ ಯಾವ ರೀತಿಯಲ್ಲಿ ಮೌನಸ್ವರೂಪನನ್ನು ಸ್ತುತಿಸಲು ಸಾಧ್ಯ?" ಎಂದರು.

ಆಗ ಈ ಮಾತುಗಳನ್ನು ಆಲಿಸುತ್ತಿದ್ದ ಭಕ್ತರೊಬ್ಬರು "ಹಿಂದೆ ಒಂದು ಶಿವರಾತ್ರಿಯ ದಿನ ಭಕ್ತರೆಲ್ಲರೂ ಭಗವಾನರನ್ನು ಸುತ್ತುವರೆದು ಕುಳಿತು, 'ಇಂದು ಭಗವಾನರು ದಕ್ಷಿಣಾಮೂರ್ತಿ ಸ್ತೋತ್ರಕ್ಕೆ ಅರ್ಥವನ್ನು ವಿವರಿಸಬೇಕು' ಎಂದು ಪ್ರಾರ್ಥಿಸಲು ಭಗವಾನರು ಹಾಗೆಯೇ ಆಗಲಿ ಎಂದು ಮಂದಹಾಸವದನರಾಗಿ ಯಾವ ಮಾತುಗಳನ್ನೂ ಆಡದೆ ಮೌನವಾಗಿ ಸಭಾಂಗಣದಲ್ಲಿ ಕುಳಿತುಬಿಟ್ಟರೆಂದೂ, ಆಗ ಭಕ್ತರು ಬಹಳ ಹೊತ್ತಿನವರೆಗೂ ಕಾದು ಕುಳಿತಿದ್ದು ಕಡೆಗೆ ಮೌನವೇ ಈ ಸ್ತೋತ್ರದ ನಿಜವಾದ ಅರ್ಥವೆಂಬುದನ್ನು ಗ್ರಹಿಸಿ ನಂತರ ಎಲ್ಲರೂ ಎದ್ದು ಸಭಾಂಗಣದಿಂದ ಹೊರಟುಹೋದರೆಂದೂ ದಂಡಪಾಣಿಸ್ವಾಮಿಗಳು ತಿಳಿಸಿದರು. ಇದು ನಿಜವೇನು?" ಎಂದು ಕೇಳಿದರು. ಭಗವಾನರು ಮುಗುಳುನಗುತ್ತ "ಹ್ಞಾಂ—ನಿಜವೇ" ಎಂದರು. ನನಗೆ ಇದನ್ನು ಕೇಳಿ ಬಹಳ ಆಶ್ಚರ್ಯವಾಗಿ, "ಹಾಗೆಂದರೆ ಭಗವಾನರು

ಮೌನವ್ಯಾಖ್ಯಾನವನ್ನು ನೀಡಿದರೇನು ?" ಎಂದು ಕೇಳಿದೆ. ಭಗವಾನರು "ಹೌದು ; ಮೌನವ್ಯಾಖ್ಯಾನವೇ" ಎಂದರು.

ಆಗ ಇನ್ನೊಬ್ಬರು "ಮೌನವೆಂದರೆ ಆತ್ಮನಿಷ್ಠೆಯೇ ಅಲ್ಲವೇನು ?" ಎಂದರು. ಭಗವಾನರು "ಹೌದು ; ಆತ್ಮನಿಷ್ಠೆಯೇ ; ಹಾಗಿಲ್ಲವಾದರೆ ಅದು ಮೌನ ಎಂತಾಗುತ್ತದೆ ?" ಎಂದರು. ಆಗ ಆ ಭಕ್ತರು "ಅದನ್ನೇ ನಾನೂ ಕೇಳುತ್ತಿರುವುದು. ಆ ಬಗೆಯ ಆತ್ಮನಿಷ್ಠೆಯನ್ನು ಪಡೆಯದೆ ಕೇವಲ ಏನೂ ಮಾತಾಡದೇ ಸುಮ್ಮನೆ ಕುಳಿತಮಾತ್ರಕ್ಕೆ ಅದು ಮೌನ ವಾಗುತ್ತದೆಯೇನು ?" ಎಂದರು. ಭಗವಾನರು, "ಅದು ಹೇಗೆ ಸರಿ-ಹೊಂದುತ್ತದೆ ? ಕೆಲವರು ತಾವು ಮೌನವನ್ನು ಆಚರಿಸುತ್ತಿದ್ದೇವೆಂದು ಸೂಚಿಸುತ್ತ, ಒಂದು ಕಪ್ಪು ಹಲಗೆಯ ಮೇಲೋ ಒಂದು ತುಂಡು ಕಾಗದದ ಮೇಲೋ ಏನನ್ನಾದರೂ ಬರೆದು ತಿಳಿಸುತ್ತಿರುತ್ತಾರೆ. ಅವುಗಳೆಲ್ಲವೂ ಮನಸ್ಸಿನ ವ್ಯವಹಾರವಲ್ಲದೆ ಮತ್ತೇನು ?" ಎಂದರು. ಮತ್ತೊಬ್ಬರು "ಹಾಗೆಂದರೆ ಸಾಮಾನ್ಯವಾಗಿ ಮಾತುಗಳನ್ನಾಡದೆ ಆಚರಿಸುವ ಮೌನದಿಂದ ಯಾವ ಪ್ರಯೋಜನವೂ ಇಲ್ಲವೇನು ?" ಎಂದು ಪ್ರಶ್ನಿಸಿದರು. ಭಗವಾನರು "ಹೊರಗಿನ ಅಡ್ಡಿಗಳ ನಿವಾರಣೆಗಾಗಿ ಒಬ್ಬರು ಹಾಗೆ ಮೌನವನ್ನು ತಳೆದರೂ ಅದನ್ನೇ ಯಥಾರ್ಥವೆಂದು ಪರಿಗಣಿಸಲಾಗದು. ನಿಜವಾದ ಮೌನವೆಂದರೆ ನಿರಂತರವಾದ ಸಂಭಾಷಣೆ ಎಂದರ್ಥ. ಅದನ್ನು ಎಲ್ಲಿಂದಲೋ ಪಡೆಯುವುದು ಎಂಬುದಿಲ್ಲ. ಅದು ಸದಾಕಾಲವೂ ಇರುವುದೇ. ಅದನ್ನು ಮರೆಮಾಡುತ್ತಿರುವ ವಿಷಯವೃತ್ತಿಗಳನ್ನು ನಿವಾರಿಸಿಕೊಳ್ಳಬೇಕು, ಅಷ್ಟೇ ಹೊರತು ಆ ಮೌನಸ್ಥಿತಿಯನ್ನು ಹೊಂದಲು ಮತ್ತೆ ಬೇರೆ ಯಾವ ಪ್ರಯತ್ನವೂ ಬೇಕಾಗಿಲ್ಲ" ಎಂದು ವಿವರಿಸಿದರು.

ಇಷ್ಟರಲ್ಲಿ ವಾರ್ತಾಪ್ರಸಾರದ ಸಂಸ್ಥೆಯೊಂದು ಧ್ವನಿಸಂಗ್ರಹದ ಯಂತ್ರದ ನೆರವಿನಿಂದ ಭಗವಾನರ ಧ್ವನಿಮುದ್ರಣವನ್ನು ಮಾಡಿಕೊಳ್ಳಲು ಆಲೋಚಿಸುತ್ತಿದ್ದಾರೆ ಎಂಬ ಸುದ್ದಿ ತಿಳಿದುಬಂತು. ಅದನ್ನು ಕೇಳಿ ಭಗವಾನರು ನಗುತ್ತಲೇ "ಓಹೋ ! ಹಾಗೇನು ? ನನ್ನ ಮಾತುಗಳೆಂದರೆ ಅದು ಕೇವಲ ಮೌನವೇ ಅಲ್ಲವೇ ? ಅಂತಹ ಮೌನವನ್ನು ಇವರು ಅದು ಹೇಗೆ ಮುದ್ರಿಸಿಕೊಳ್ಳುತ್ತಾರೋ ? ಇರುವುದು ಎಂಬುದರ ನಿಜಸ್ವರೂಪ

ಕೇವಲ ಮೌನವೇ ಆಗಿದೆ. ಹಾಗಾಗಿ ಅದರ ಧ್ವನಿಮುದ್ರಣವು ಯಾ ಸಾಧ್ಯ ?" ಎಂದರು. ಆಗ ಅಲ್ಲಿದ್ದ ಸಭಿಕರೆಲ್ಲರೂ ಒಬ್ಬರ ಮುಖವನ್ನೊ ನೋಡುತ್ತ ಸುಮ್ಮನಾದರು. ಸಭಾಂಗಣದಲ್ಲಿ ಕೇವಲ ಮೌ ಆವರಿಸಿತು. ದಕ್ಷಿಣಾಮೂರ್ತಿಸ್ವರೂಪರೇ ಆದ ನಮ್ಮ ಭಗವಾ ದಕ್ಷಿಣಾಭಿಮುಖವಾಗಿ ಕುಳಿತು ಮೌನಮುದ್ರೆಯನ್ನು ಧರಿಸಿದರು. ಆ ಜ್ಯೋತಿಯೆಂಬ ಪ್ರಕಾಶವು ಬೆಳ್ಳಿಯನ್ನು ಎಲ್ಲೆಡೆ ಹರಡಿದೆಯೋ ಎಂ ತೋರುವ ಜ್ವಾಜ್ವಲ್ಯಮಾನವಾದ ಕಾಂತಿಯಿಂದೊಡಗೂಡಿದ ಭಗವಾ ಮಂಗಳಮೂರ್ತಿ ನಮ್ಮೆದುರಿಗೇ ಕಂಗೊಳಿಸುತ್ತಿತ್ತು. "ಸ್ವಾತ್ಮಾರಾ ಮುದಿತವದನಂ ದಕ್ಷಿಣಾಮೂರ್ತಿಮೀಡೇ"* ಇಂದು ಎಂತಹ ಚಿರಸ್ಮರಣೀ ವಾದ ದಿನ!

ಇತಿ

**ಸೋದರಿ**

೨

6–9–47

## ಸ್ವಸ್ವಾತ್ಮಂತ ನಿವೃತ್ತಿ

ಹೋದ ತಿಂಗಳು ಅತ್ತಿಗೆ ಇಲ್ಲಿರುವಾಗ ತೆಲುಗು 'ವಿಚಾರಮಣಿಮಾ ಪುಸ್ತಕದ ಕರಡಚ್ಚಿನ ಪ್ರತಿ ಬಂದಿತು. ಭಗವಾನರು ಅದನ್ನು ತಿದ್ದಿ ಮಧ್ಯಾಹ್ನ ಮೂರು ಗಂಟೆಗೆ ನನ್ನ ಕೈಗೆ ಕೊಟ್ಟರು. ಅತ್ತಿಗೆ ಆ ಪ್ರ ಯನ್ನು ಓದಿ, ಅದರಲ್ಲಿದ್ದ 'ಸ್ವಸ್ವಾತ್ಯಂತ ನಿವೃತ್ತಿ' ಎಂಬ ಪದದ ಅರ್ಥ ವನ್ನು ನನ್ನೊಡನೆ ಕೇಳಿದರು. ಅದು ನನಗೂ ಸರಿಯಾಗಿ ತಿಳಿದಿರಲಿಲ್ಲವಾ

---

* ಮೌನವ್ಯಾಖ್ಯಾ ಪ್ರಕಟಿತ ಪರಬ್ರಹ್ಮತತ್ತ್ವಂ ಯುವಾನಂ
ವರ್ಷಿಷ್ಠಾಂತೇವ ಸದೃಷಿಗಣೈರಾವೃತಂ ಬ್ರಹ್ಮನಿಷ್ಠೈಃ ।
ಆಚಾರ್ಯೇಂದ್ರಂ ಕರಕಲಿತಚಿನ್ಮುದ್ರಮಾನಂದ ರೂಪಂ
ಸ್ವಾತ್ಮಾರಾಮಂ ಮುದಿತವದನಂ ದಕ್ಷಿಣಾಮೂರ್ತಿಮೀಡೇ ॥

—ದಕ್ಷಿಣಾಮೂರ್ತಿಸ್ತೋತ್ರ

ಕಾರಣ ಏನೋ ಒಂದು ರೀತಿ ಉತ್ತರ ಹೇಳಲು ಅತ್ತಿಗೆಗೆ ಸಮಾಧಾನವಾಗ ಲಿಲ್ಲ. ಭಗವಾನರು ಇದನ್ನು ನೋಡಿ, "ಏನು? ಅದರಲ್ಲಿ ತಪ್ಪೇನಾದರೂ ಇದೆಯೇನು?" ಎಂದು ಕೇಳಿದರು. ನಾನು "ಇಲ್ಲ. ಇದರಲ್ಲಿ ಸ್ವಪ್ನಾ-ತ್ಯಂತ ನಿವೃತ್ತಿ ಎಂದಿದೆ; ಅದರ ಅರ್ಥವೇನೆಂದು ಅತ್ತಿಗೆ ಕೇಳುತ್ತಿದ್ದಾರೆ" ಎಂದೆ. ಭಗವಾನರು ಕರುಣೆಯಿಂದ "ಸ್ವಪ್ನಾತ್ಯಂತ ನಿವೃತ್ತಿ ಎಂದರೆ ಸ್ವಪ್ನವೇ ಇಲ್ಲದ ಸ್ಥಿತಿ ಎಂದು ಅರ್ಥ" ಎಂದರು. ನಾನು "ಹಾಗೇನು? ಹಾಗಾದರೆ ಜ್ಞಾನಿಗಳಿಗೆ ನಿಜವಾಗಿಯೂ ಸ್ವಪ್ನವೇ ಇಲ್ಲವೆನ್ನುತ್ತೀರೇನು?" ಎಂದೆ. ಭಗವಾನರು "ಹೌದು" ಎಂದರು. ಅತ್ತಿಗೆಗೆ ಆಗಲೂ ಸಂದೇಹ ನಿವೃತ್ತಿಯಾಗಲಿಲ್ಲ. ಅಷ್ಟರಲ್ಲಿ ಬೇರೊಂದು ಪ್ರಸಂಗ ಬಂದಕಾರಣ ಆ ಪ್ರಶ್ನೆ ಯನ್ನು ಮುಂದುವರಿಸದೆ ಅಲ್ಲಿಗೇ ಬಿಟ್ಟೆವು. ರಾತ್ರಿ ನನ್ನೊಡನೆ ಅತ್ತಿಗೆ "ಯೋಗವಾಸಿಷ್ಠದಲ್ಲಿ ಜ್ಞಾನಿಗಳು ಕರ್ಮಗಳನ್ನು ಮಾಡುತ್ತಿರುವವರಂತೆ ಇತರರಿಗೆ ತೋರುತ್ತದೆಯೇ ಹೊರತು ವಾಸ್ತವವಾಗಿ ಅವರಿಗೆ ಅವು ಯಾವುವೂ ಅಂಟುವುದಿಲ್ಲವೆಂದು ಹೇಳಿದೆಯಲ್ಲಾ; ಇದರ ಅರ್ಥವನ್ನೂ ಶ್ರೀಗಳವರಲ್ಲಿ ಕೇಳಿದ್ದರೆ ಚೆನ್ನಾಗಿತ್ತು" ಎಂದರು. ನಾನು "ಭಗವಾನರು ಕರುಣಾಮಯರಲ್ಲವೇ? ಯಾವುದಾದರೂ ಒಂದು ಅವಕಾಶವನ್ನು ಕಲ್ಪಿಸಿ ಕೊಂಡು ನಿಮ್ಮ ಈ ಸಂದೇಹವನ್ನು ನಿವಾರಿಸದೇ ಇರುತ್ತಾರೆಯೇನು?" ಎಂದು ಸಮಾಧಾನಪಡಿಸಿದೆ.

ಮರುದಿನ ಎಂಟು ಗಂಟೆಗೆ ನಾವಿಬ್ಬರೂ ಭಗವಾನರ ಸನ್ನಿಧಿಗೆ ಹೋದೆವು. ಆಗ ಸುಂದರೇಶಯ್ಯರ್ ಭಗವಾನರನ್ನು ಸ್ವಪ್ನಾತ್ಯಂತ ನಿವೃತ್ತಿಯ ವಿಷಯವಾಗೇ ಕೇಳುತ್ತಿರುವುದೂ, ಭಗವಾನರು ಉತ್ತರಿಸು ತ್ತಿರುವುದೂ ನಡೆಯುತ್ತಿತ್ತು. ಈ ಸಂದರ್ಭ ಸಿಕ್ಕಿದ್ದೇ ಸಾಕೆಂದು ಅತ್ತಿಗೆ "ಸ್ವಪ್ನಾತ್ಯಂತ ನಿವೃತ್ತಿ ಎಂದರೆ ಸ್ವಪ್ನವೇ ಇಲ್ಲದ ಸ್ಥಿತಿ ಎಂದು ಭಗವಾನರು ಅಪ್ಪಣೆಕೊಡಿಸುತ್ತಿದ್ದಾರಲ್ಲಾ! ಹಾಗೆಂದರೆ ಜ್ಞಾನಿಗೆ ನಿಜವಾಗಿ ಸ್ವಪ್ನವೇ ಆಗುವುದಿಲ್ಲವೇನು?" ಎಂದರು. ಭಗವಾನರು "ಹೌದು, ಕೇವಲ ಸ್ವಪ್ನವೇ ಅಲ್ಲ, ಜಾಗ್ರತ್ತು (ಎಚ್ಚರ), ಸುಷುಪ್ತಿ (ತನಿನಿದ್ರೆ), ಸ್ವಪ್ನ (ಕನಸು) ಇವು ಮೂರೂ ಇಲ್ಲವೆಂದೇ ಅರ್ಥ. ಈ ಮೂರೂ ಅವಸ್ಥೆಗಳು ಇಲ್ಲದ ಸ್ಥಿತಿ ಯಾವುದಿದೆಯೋ ಅದೇ ಜ್ಞಾನಿಯ ಯಥಾರ್ಥವಾದ ಸ್ಥಿತಿ" ಎಂದು

ವಿವರಿಸಿದರು. ಆಗ ನಾನು "ಭಗವಾನ್! ಜಾಗ್ರದವಸ್ಥೆಯೂ ಸಹ ಸ್ವಪ್ನಾವಸ್ಥೆಗೆ ಸಮಾನವೇನು?" ಎಂದೆ. ಭಗವಾನರು "ಹೌದು, ಸ್ವಪ್ನಾವಸ್ಥೆಗೆ ಸಮಾನವೇ. ಅದು ಕ್ಷಣಿಕ ಸ್ವಪ್ನ; ಇದು ದೀರ್ಘ ಸ್ವಪ್ನ. ಅಷ್ಟೇ ವ್ಯತ್ಯಾಸ" ಎಂದರು. ನಾನು "ಹಾಗಾದರೆ ಸುಷುಪ್ತಿಯನ್ನೂ ಸಹ ಸ್ವಪ್ನವೇ ಎನ್ನುತ್ತೀರಾ?" ಎಂದು ಕೇಳಿದೆ. ಭಗವಾನರು "ಇಲ್ಲ. ಅದು ವಾಸ್ತವವೇ. ತೋರುವಿಕೆಯೇ (ದೃಶ್ಯವೇ) ಅಲ್ಲಿ ಇಲ್ಲದಿರುವಾಗ ಅದನ್ನು ಸ್ವಪ್ನವೆಂದು ಹೇಳುವುದು ಹೇಗೆ? ಆದರೆ ಆ ಸ್ಥಿತಿಯಲ್ಲಿ ಏನೂ ಅರಿವಾಗುವುದಿಲ್ಲವಾದುದರಿಂದ ಅಲ್ಲಿ ಅವಿದ್ಯೆ ಇದೆ. ಆದುದರಿಂದ ಅದನ್ನೂ ನಿರಾಕರಿಸಬೇಕಾದದ್ದೇ" ಎಂದರು. ನಾನು, ಸುಷುಪ್ತಿಯನ್ನು ಕಾರಣ ಸ್ವಪ್ನ (ಬೀಜರೂಪವಾಗಿರುವ ಸ್ವಪ್ನ) ಎಂದು ಹೇಳಬಹುದೇನು?" ಎಂದೆ. ಭಗವಾನರು "ಕೆಲವರು ಯಾವುದೋ ಪರಿಭಾಷೆ (ವಿವರಣೆ) ಗೋಸ್ಕರ ಆ ರೀತಿಯಾಗಿ ವಿವರಿಸಬೇಕಾಗಿ ಬಂದು ಹಾಗೆ ಹೇಳಿದ್ದಾರೆಯೇ ಹೊರತು, ಬೇರೇನೂ ಇಲ್ಲ. ಕ್ಷಣಿಕ, ದೀರ್ಘ ಇವು ಸ್ವಪ್ನ ಮತ್ತು ಜಾಗ್ರದವಸ್ಥೆಗಳಿಗೇ. ಆದರೆ ಕೆಲವರು 'ಇಷ್ಟು ವರ್ಷಗಳು ಬದುಕಿದ್ದೇವೆ, ಈ ಮನೆ ಮತ್ತು ಬಾಗಿಲುಗಳು ಇವುಗಳೆಲ್ಲವೂ ಇಷ್ಟೊಂದು ಸ್ಪಷ್ಟವಾಗಿ ಕಣ್ಣಿಗೆ ಕಾಣಿಸುತ್ತಿವೆ; ಇದು ಸ್ವಪ್ನ ಎಂದರೆ ಹೇಗೆ ಸಂಗತವಾಗುತ್ತದೆ' ಎಂದು ಅನುಮಾನಿಸಿದರೆ, ನಿದ್ರೆಯಲ್ಲಿ ಸ್ವಪ್ನವೂ ಸಹ ದೀರ್ಘವಾಗಿದ್ದ ಹಾಗೆಯೇ ಕಾಣಿಸುತ್ತದೆ. ಎಚ್ಚರವಾದಮೇಲಲ್ಲವೆ ಇವೆಲ್ಲವೂ ಕ್ಷಣಿಕವೆಂದು ಗೊತ್ತಾಗುವುದು? ಅದೇ ರೀತಿ ಒಬ್ಬನಿಗೆ ಜ್ಞಾನೋದಯವಾದಾಗ ಇವೆಲ್ಲವೂ ಕ್ಷಣಿಕವಾಗೇ ಕಂಡುಬರುತ್ತದೆ. ಆದುದರಿಂದ 'ಸ್ವಪ್ನಾತ್ಯಂತ ನಿವೃತ್ತಿ' ಎಂದರೆ ಅವಿದ್ಯೆ ಮತ್ತೆ ಬಾರದಂತೆ ಸಂಪೂರ್ಣವಾಗಿ ನಾಶವಾಗುವುದು ಎಂದರ್ಥ. ಅತ್ಯಂತ ನಿವೃತ್ತಿ ಎಂದರೆ ಅದು ಸ್ವಲ್ಪವೂ ಉಳಿಯದೆ ಮತ್ತೆ ಬಾರದಿರುವ ಸ್ಥಿತಿ" ಎಂದು ವಿವರಿಸಿದರು.

ಆಗ ಅತ್ತಿಗೆ "ಸುಷುಪ್ತಿಯಲ್ಲಿ ಇರುವ ಆನಂದವನ್ನೇ ಸಮಾಧಿಯಲ್ಲಿ ಹೊಂದಬೇಕು ಎಂದು ಹೇಳುತ್ತಾರೆ. ಸುಷುಪ್ತಿಯಲ್ಲಿ ಅವಿದ್ಯೆ ಇದ್ದೇ ಇದೆಯಲ್ಲವೇ; ಹಾಗಾದರೆ ಇದು ಹೇಗೆ ಸರಿಹೊಂದುತ್ತದೆ?" ಎಂದು ಪ್ರಶ್ನಿಸಿದರು. ಭಗವಾನರು "ಅದಕ್ಕಾಗಿಯೇ ಸುಷುಪ್ತಿಯನ್ನೂ ಸಹ ನಿರಾಕರಿಸ

ಬೇಕೆಂದೇ ಹೇಳಿದ್ದಾರೆ. ಸುಷುಪ್ತಿಯಲ್ಲಿ ಆನಂದಮಯನಾಗಿ ಒಬ್ಬನು ಇರುವವನಾದರೂ ಅವನಿಗೆ ಅದರ ತಿಳಿವಳಿಕೆಯೇ ಇಲ್ಲದಿರುವ ಕಾರಣ ಆ ಸ್ಥಿತಿಯನ್ನೂ ಬಿಡಬೇಕಾದದ್ದೇ. ಆದರೆ ಅಲ್ಲಿ (ಸುಷುಪ್ತಿಯಲ್ಲಿ) ಆನಂದ ವೆಂಬುದು ಇತ್ತು ಎಂದು ಹೇಳುವುದು ಹೇಗೆ ಎಂದು ಕೇಳಿದರೆ, ನಾನು ಸುಖ ವಾಗಿ ನಿದ್ರೆ ಮಾಡಿದೆ. ಬಹಳ ಆನಂದವಾಗಿತ್ತು ಎಂದು ಎಚ್ಚರವಾದಮೇಲೆ ಹೇಳುತ್ತಾರಲ್ಲವೇ? ಎಂಬುದೇ ಇದಕ್ಕೆ ಉತ್ತರ. ಈ ಆನಂದವನ್ನು ಜಾಗ್ರತ್ತಿನಲ್ಲೇ ನಾವು ಅನುಭವಿಸಬೇಕು. ಅದೇ ಸಮಾಧಿ" ಎಂದರು. ನಾನು "ಹಾಗಾದರೆ ಎಚ್ಚರವಾಗಿದ್ದು ನಿದ್ರೆಮಾಡಬೇಕು ಎಂದಹಾಗಾ ಯಿತು" ಎಂದೆ. ಭಗವಾನರು "ಹೌದು, ಅಷ್ಟೇ" ಎಂದರು.

ಆಗ ಅತ್ತಿಗೆ "ಜ್ಞಾನಿಗಳು ಕರ್ಮಗಳನ್ನು ಮಾಡುತ್ತಿರುವಂತೆ ಇತರ ರಿಗೆ ತೋರುತ್ತದೆಯೇ ಹೊರತು, ವಾಸ್ತವವಾಗಿ ಅವರಿಗೆ ಅವು ಯಾವುವೂ ಅಂಟುವುದಿಲ್ಲ ಎಂದು ಯೋಗವಾಸಿಷ್ಠದಲ್ಲಿ ಹೇಳಿದ್ದಾರಲ್ಲಾ ; ದೃಷ್ಟಿಭೇದ ದಿಂದ ಇತರರಿಗೆ ಹಾಗೆ ತೋರುತ್ತದೆಯೋ ಅಥವಾ ನಿಜವಾಗಿಯೂ ಅವರಿಗೆ ಏನೂ ಅಂಟುವುದೇ ಇಲ್ಲವೋ?" ಎಂದು ಪ್ರಶ್ನಿಸಿದರು. ಭಗವಾನರು "ನೋಡುವವರ ದೃಷ್ಟಿಯನ್ನು ಅನುಸರಿಸಿ ಹಾಗೆ ಕಂಡುಬರುತ್ತದೆ. ವಾಸ್ತವವಾಗಿ ಆ ಕರ್ಮಗಳು ಅವರನ್ನು ಅಂಟುವುದೇ ಇಲ್ಲ (ಬಂಧಿಸು ವುದಿಲ್ಲ)" ಎಂದರು. ಅತ್ತಿಗೆ, "ಸ್ವಪ್ನದರ್ಶನಗಳು, ಸಾಕ್ಷಾತ್ಕಾರಗಳು ಎಂಬುದಾಗಿ ಹೇಳುತ್ತಾರಲ್ಲಾ ; ಅವುಗಳೆಲ್ಲವೂ ಏನು?" ಎಂದರು. ಭಗವಾನರು "ಜ್ಞಾನಿಗಳ ದೃಷ್ಟಿಗೆ ಅವುಗಳೆಲ್ಲವೂ ಒಂದೇ ಎಂದು ತೋರು ತ್ತದೆ" ಎಂದರು. ಆಕೆ ಮತ್ತೆ "ಗಣಪತಿ ಮುನಿಗಳಿಗೆ ಭಗವಾನರು ತಿರುವತ್ತೂರಿನಲ್ಲಿ ದರ್ಶನವಿತ್ತು ಅನುಗ್ರಹಿಸಿದಂತೆ ದರ್ಶನವಾಯಿತೆಂದೂ ಅದೇ ವೇಳೆಗೆ ತಿರುವತ್ತೂರಿಗೆ ಹೋಗಿ ಮುನಿಗಳಿಗೆ ಅನುಗ್ರಹಿಸಿದಂತೆ ಭಗವಾನರಿಗೂ ಕಂಡಿತು ಎಂಬುದಾಗಿ ಭಗವಾನರ ಜೀವನ ಚರಿತ್ರೆಯಲ್ಲಿ ತಿಳಿಸಿದ್ದಾರಲ್ಲಾ? ಹಾಗಾದರೆ ಅದೇನು?" ಎಂದು ಪ್ರಶ್ನಿಸಿದರು. "ಅಂತಹವುಗಳೆಲ್ಲವನ್ನೂ ದಿವ್ಯದರ್ಶನಗಳೆಂದು ಹೇಳುತ್ತಾರೆ ಎಂಬುದಾಗಿ ಹಿಂದೆಯೇ ತಿಳಿಸಿದ್ದೇನಲ್ಲವೇ?" ಎನ್ನುತ್ತ ಭಗವಾನರು ಈ ಮಾತುಗಳು ಮತ್ತೆ ಮುಂದುವರಿಯುವುದು ಬೇಡವೆಂಬಂತೆ ಮೌನವನ್ನು ಧರಿಸಿದರು.

೩

8-9-47

## ಮಾಡುವವರು ಯಾರು? ಮಾಡುವುದು ಏನನ್ನು?

ಇಂದು ಬೆಳಿಗ್ಗೆ ಐರೋಪ್ಯರೊಬ್ಬರು ಶ್ರೀಗಳವರ ಮುಂದೆ ಕುಳಿತು ಕೊಂಡು ಭಕ್ತನೊಬ್ಬನ ಮೂಲಕ ಹೀಗೆ ಪ್ರಶ್ನಿಸಿದರು: "ಎಷ್ಟೇ ಧ್ಯಾನ ಮತ್ತು ತಪಸ್ಸನ್ನು ಮಾಡಿದರೂ ಸಹ ಸಮಾಧಿಯನ್ನು ಪಡೆಯದಿದ್ದರೆ ಮೋಕ್ಷವಿಲ್ಲ ಎಂದು ಮಾಂಡೂಕ್ಯ ಉಪನಿಷತ್ತಿನ ಕಾರಿಕೆಯಲ್ಲಿ ತಿಳಿಸಿದ್ದಾರೆ; ಇದು ಸತ್ಯವೇನು? ಸಮಾಧಿಯು ಸಿದ್ಧಿಸದಿದ್ದರೆ ಮೋಕ್ಷವಿಲ್ಲವೇನು?"

ಭಗವಾನರು ಅದಕ್ಕೆ ಸಾವಧಾನವಾಗಿ "ಸರಿಯಾಗಿ ಅರ್ಥಮಾಡಿ ಕೊಂಡರೆ ಎಲ್ಲವೂ ಒಂದೇ. ಅದನ್ನು ಸಮಾಧಿಯೆನ್ನಿ, ತಪಸ್ಸೆನ್ನಿ; ಹೇಗಾದರೂ ಅದನ್ನು ಕರೆಯಿರಿ; ನಿರಂತರವಾಗಿ ಹರಿಯುವ ಆಜ್ಯಧಾರೆ ಯಂತೆ ಯಾವಾಗಲೂ ಸ್ಥಿರವಾಗಿರುವ ಸ್ಥಿತಿ ಯಾವುದೋ ಅದೇ ಧ್ಯಾನ, ಅದೇ ತಪಸ್ಸು, ಅದೇ ಸಮಾಧಿಯೂ ಸಹ. ತಾನು ತಾನಾಗಿ ನೆಲೆಸುವುದೇ ಸಮಾಧಿ" ಎಂದರು.

ಆ ಭಕ್ತರು "ಮಾಂಡೂಕ್ಯದಲ್ಲಿ ಸಮಾಧಿಯನ್ನು ಅವಶ್ಯವಾಗಿ ಪಡೆಯ ಬೇಕು ಎಂದಿದ್ದಾರಲ್ಲಾ?" ಎಂದರು. ಭಗವಾನರು "ಅಲ್ಲ ಎಂದು ಯಾರು ಹೇಳುತ್ತಾರೆ? ಮಾಂಡೂಕ್ಯದಲ್ಲೇ ಅಲ್ಲ ಎಲ್ಲೆಲ್ಲಿಯೂ ಹಾಗೆಯೇ ಹೇಳಿ ದ್ದಾರೆ. ತಾನು ಯಾರು ಎಂಬುದನ್ನು ಅರಿಯುವುದೇ ಅಲ್ಲವೆ ಸಮಾಧಿ ಯಿಂದ ಉಂಟಾಗುವ ಉಪಯೋಗ? ಸ್ವಲ್ಪಹೊತ್ತು ದೇಹದಮೇಲಿನ ಪರಿವೆ ಯಿಲ್ಲದೆ ಜಡನಂತೆ ಕುಳಿತ ಮಾತ್ರಕ್ಕೆ ಏನು ಪ್ರಯೋಜನ? ಕೈಯಲ್ಲೊಂದು ಕುರು ಎದ್ದಿದೆ ಎನ್ನಿ. ಅದನ್ನು ತೆಗೆದುಹಾಕಲು ಶಸ್ತ್ರಚಿಕಿತ್ಸೆ ಮಾಡುವ ಸಲುವಾಗಿ ಕ್ಲೋರೋಫಾರಂ ಕೊಡುತ್ತಾರೆ. ಆಗ ನಿಮಗೆ ಏನೊಂದೂ ಗೊತ್ತಾಗುವುದಿಲ್ಲ. ಅಷ್ಟು ಮಾತ್ರಕ್ಕೇ ಅದನ್ನು ಸಮಾಧಿ ಎನ್ನಲಾಗು ತ್ತದೆಯೇನು? ಇದೂ ಅಷ್ಟೆ. ಸಮಾಧಿ ಎಂಬುದರ ಅರ್ಥವೇನೆಂದು ಮೊದಲು ತಿಳಿಯಬೇಕು. ನಾನು ಯಾರು ಎಂಬುದನ್ನು ಅರಿಯದೆ ಸಮಾಧಿ ಸ್ಥಿತಿಯ ವಿಷಯವನ್ನು ಅರಿಯುವುದು ಹೇಗೆ? ಮೊದಲು ಅದನ್ನು ಅರಿತು

ಕೊಂಡರೆ ಸಮಾಧಿಸ್ಥಿತಿ ಎಂಬುದು ತಾನಾಗಿಯೇ ಉಂಟಾಗುತ್ತದೆ" ಎಂದರು.

ಬಹಳ ಕಾಲದಿಂದಲೂ ಇಲ್ಲಿಗೆ ಬಂದುಹೋಗುತ್ತಿರುವ ಆಂಧ್ರರೊಬ್ಬರು "ಸಮಾಧಿಯನ್ನು ಅಭ್ಯಾಸಮಾಡಿ ವಸ್ತುಸ್ಥಿತಿಯನ್ನು ಅರಿತುಕೊಂಡ ನಂತರವೂ ಅನುಸಂಧಾನವನ್ನು ಮಾಡುತ್ತಿರಬೇಕೇ?" ಎಂದರು. ಭಗವಾನರು "ಅನುಸಂಧಾನವನ್ನು ಮಾಡುವುದೆಂದರೆ ಮಾಡುವವನೊಬ್ಬ, ಮಾಡುವುದೆಂಬುದು ಇನ್ನೊಂದು, ಪಡೆಯುವ ವಸ್ತು ಎಂಬುದು ಮತ್ತೊಂದು ಹೀಗೆ ಒಟ್ಟು ಮೂರಾಯಿತಲ್ಲವೇ? ಆದರೆ ಇರುವ ವಸ್ತು ಒಂದೇ. ಅದನ್ನು ಅರಿತನಂತರ ಅವನೇ (ಅಹಂ ಎಂಬುದೇ) ಇರುವುದಿಲ್ಲ ವಲ್ಲಾ! ಇನ್ನು ಮಾಡುವವರು ಯಾರು? ಮಾಡುವುದು ಏನನ್ನು?" ಎಂದರು.

ಅಷ್ಟರಲ್ಲಿ ತಮಿಳು ಭಕ್ತನೊಬ್ಬನು 'ತಿರುವಾಚಕಂ' ಎಂಬ ಪುಸ್ತಕ ವನ್ನು ತೆರೆದು 'ಪಿಡಿತ್ತಪತ್ತು' ಎಂಬ ಹಾಡನ್ನು ಹಾಡಲು ಮೊದಲು ಮಾಡಿದನು. ಅದರ ಹತ್ತು ಚರಣಗಳ ಕೊನೆಯಲ್ಲೂ ಬರುವ ಭಾವ ಇದು: "ಓ ಈಶ್ವರನೇ! ನೀನು ನನ್ನಿಂದ ತಪ್ಪಿಸಿಕೊಂಡು ಹಾರಿಹೋಗಬೇಕೆಂದು ನೋಡುತ್ತಿದ್ದೀಯೆ, ಆದರೆ ನಾನು ನಿನ್ನನ್ನು ಬಿಗಿಯಾಗಿ ಹಿಡಿದುಕೊಂಡಿ ದ್ದೇನೆ. ಇನ್ನು ನೀನು ನನ್ನಿಂದ ತಪ್ಪಿಸಿಕೊಂಡು ಹೋಗುವುದು ಹೇಗೆ?" ಭಗವಾನರು ಆ ಹಾಡನ್ನು ಕೇಳಿಸಿಕೊಂಡು ಮುಗುಳುನಗುತ್ತ "ಅವನು ಹಾರಿಹೋಗುತ್ತಾನಂತೆ! ಇವನು ಹಿಡಿದುಕೊಂಡಿದ್ದಾನಂತೆ! ಅವನು ಎಲ್ಲಿಗೆ ಹಾರಿಹೋಗುವುದು! ಅವನಿಲ್ಲದ ಸ್ಥಳ ಯಾವುದಿದೆ? ನಾನು ಎನ್ನುವ ಇವನು ಯಾರು? ಇದೂ ಒಂದು ವಿನೋದ! ಈ ಪುಸ್ತಕದಲ್ಲೇ ಇನ್ನೊಂದು ಪದಿಕ (ಹತ್ತು ಚರಣಗಳಿರುವ ಪದ್ಯ) ವಿದೆ. ಅದರ ಒಂದು ಚರಣದ ತಾತ್ಪರ್ಯ ಹೀಗಿದೆ ನೋಡಿ: 'ನನ್ನ ಹೃದಯವನ್ನೇ ನಿನ್ನ ಮಂದಿರವನ್ನಾಗಿ ಮಾಡಿಕೊಂಡ ನನ್ನ ದೈವವಾದ ತಿರುಪ್ಪೇರುಂದುರೈ ಪರಮೇಶ್ವರಾ! ನಿನ್ನನ್ನು ನನಗಿತ್ತು, ಅದಕ್ಕೆ ಪ್ರತಿಯಾಗಿ ನನ್ನನ್ನು ನೀನು ತೆಗೆದುಕೊಂಡುಬಿಟ್ಟಿದ್ದೀಯೆ. ಶಂಕರಾ! ನಮ್ಮಿಬ್ಬರಲ್ಲಿ ಬುದ್ಧಿವಂತರು ಯಾರು? ನಿನ್ನನ್ನು ನನಗಿತ್ತರೆ, ನಾನು ಅಂತ್ಯವಿಲ್ಲದ ಆನಂದವನ್ನು

ಹೊಂದುತ್ತೇನೆ. ನನ್ನನ್ನು ನೀನು ತೆಗೆದುಕೊಂಡರೆ ನಿನಗೆ ಬಂದ ಲಾಭ ವೇನು? ಎಲೈ ತಂದೆಯೇ! ದೇವನೇ! ನನ್ನ ಶರೀರವನ್ನೇ ದೇವಾಲಯ ವನ್ನಾಗಿ ಮಾಡಿಕೊಂಡಿರುವ ನಿನ್ನ ಈ ಪ್ರೀತಿಯ ಕೆಲಸಕ್ಕೆ ಪ್ರತ್ಯುಪಕಾರ ವನ್ನು ಮಾಡಲು ನನ್ನದೆಂಬುದೇನೂ ಉಳಿದಿಲ್ಲವಲ್ಲಾ?' * ಎನ್ನುತ್ತಾನೆ. ಅಂದರೆ ನಾನು ಎಂದು ಹೇಳಿಕೊಳ್ಳುವ ಅನ್ಯವಸ್ತುವೇ ಇಲ್ಲ ಎಂದು ತಾತ್ಪರ್ಯ. ನೋಡಿ ಈ ಆಶ್ಚರ್ಯ! ಭಕ್ತಿಯಾಗಲಿ, ಅನುಸಂಧಾನ ವಾಗಲಿ, ಸಮಾಧಿಯಾಗಲಿ 'ತಾನೇ' (ಅಹಂ ಎಂಬುದೇ) ಇಲ್ಲದಿರುವಾಗ ಇನ್ನು ಮಾಡುವವನು ಯಾರು? ಮಾಡುವುದು ಏನನ್ನು?" ಎಂದು ವಿವರಿಸಿದರು.

೪

10–9–47

## ಇರುವ ಸ್ಥಳದಲ್ಲೇ ಇರು

ಇಂದು ಬೆಳಿಗ್ಗೆ ಒಂಬತ್ತೂಮುಕ್ಕಾಲು ಗಂಟೆ ಸಮಯಕ್ಕೆ ಭಗವಾನರು ಹೊರಗೆ ಹೋಗಲು ಏಳುತ್ತಿರುವಾಗ ಅಲ್ಲಿಗೆ ಹೊಸದಾಗಿ ಬಂದಿದ್ದ ಆಂಧ್ರ-ಯುವಕನೊಬ್ಬನು ಭಗವಾನರ ಸುಖಾಸನದ ಬಳಿಸಾರಿ "ಸ್ವಾಮೀ! ನಾನು ತಪಸ್ಸನ್ನು ಮಾಡಬೇಕೆಂದು ಹೊರಟುಬಂದಿದ್ದೇನೆ. ಅದಕ್ಕೆ ಯಾವ ಸ್ಥಳ

* ತಂದದು ಉನ್ ತನ್ನೈಕ್ ಕೊಂಡದು ಎನ್ ತನ್ನೈಚ್
ಚಂಕರಾ ಆರ್ ಕೋಲೋ ಚತುರರ್
ಅಂತಮ್ ಒನ್ರು ಇಲ್ಲಾ ಆನಂದಂ ಪೆಟ್ರೇನ್
ಯಾದು ನೀ ಪೆಟ್ರದು ಒನ್ರು ಎನ್ಪಾಲ್
ಚಿಂತೈಯೇ ಕೋಯಿಲ್ ಕೊಂಡ ಎಂ ಪೆರುಮಾನ್
ತಿರುಪ್ಪೇರುಂದುರೈ ಉರೈ ಸಿವನೇ
ಎನ್ದೈಯೇ ಈಶಾ ಉಡಲ್ ಇಡಂ ಕೊಂಡಾಯ್
ಯಾನ್ ಇದರ್ಕು ಇಲನ್ ಓರ್ ಕೈಮ್ಮಾರೇ

—ಕೋಯಿಲ್ ತಿರುಪ್ಪದಿಕಮ್ (೧೦) ತಿರುವಾಚಕಂ

ಪ್ರಶಸ್ತವಾಗಿದೆ ಎಂಬುದು ನನಗೆ ಗೊತ್ತಿಲ್ಲ. ಆದುದರಿಂದ ನೀವು ನನ್ನನ್ನು ಯಾವ ಸ್ಥಳದಲ್ಲಿರು ಎಂದು ಅಪ್ಪಣೆ ಕೊಡಿಸುತ್ತೀರೋ ಅದೇ ಸ್ಥಳದಲ್ಲಿಯೇ ಇರುತ್ತೇನೆ" ಎಂದನು. ಅದಕ್ಕೆ ಭಗವಾನರು ಏನೂ ಉತ್ತರವೀಯಲಿಲ್ಲ. ಆತನು ಹಾಗೆಯೇ ನಿಂತಿದ್ದನು. ಭಗವಾನರು ಬಗ್ಗಿ ತಮ್ಮ ಕಾಲುಗಳನ್ನು ನೀವಿಕೊಳ್ಳುತ್ತ ತಮ್ಮೊಳಗೆ ತಾವೇ ನಸುನಗುತ್ತಿದ್ದರು. ಅವರೇನು ಹೇಳು ತ್ತಾರೋ ಎಂದು ನಾವೆಲ್ಲರೂ ಕುತೂಹಲದಿಂದ ಎದುರುನೋಡುತ್ತಲೇ ಇದ್ದೆವು. ಭಗವಾನರು ತಮ್ಮ ಕೋಲನ್ನು ಊರಿಕೊಂಡು ಏಳುತ್ತ ಅನುಚರ ರತ್ತ ತಿರುಗಿ "ಯಾವ ಸ್ಥಳದಲ್ಲಿರಬೇಕೆಂದು ಕೇಳಿದರೆ ಏನೆಂದು ಹೇಳುವುದು? ಯಾವ ಸ್ಥಳದಲ್ಲಿ 'ತಾನು' ಇದ್ದಾನೋ ಆ ಸ್ಥಳದಲ್ಲೇ ಇರುವುದು ಒಳ್ಳೆ ಯದು. 'ಇರುವ ಸ್ಥಳದಲ್ಲೇ ಇರು' ಎಂದು ತಿಳಿಸು" ಎನ್ನುತ್ತ ಎದ್ದು ನಗು ತ್ತಲೇ ಹೊರಗೆ ಹೊರಟುಹೋದರು.

ಆಗ ಆ ಯುವಕನ ಮುಖವು ಕುಂದಿ, ಅಲ್ಲಿದ್ದವರೊಡನೆ "ಅಯ್ಯೋ! ಇದೇನಿದು? ಇರುವ ಸ್ಥಳದಲ್ಲೇ ಇರು ಎಂದುಬಿಟ್ಟರಲ್ಲಾ! ಏನೋ ದೊಡ್ಡವರು, ಒಂದು ಯೋಗ್ಯವಾದ ಸ್ಥಳವನ್ನು ಸೂಚಿಸುತ್ತಾರೆಂದು ಕೇಳಿದರೆ 'ಯಾವ ಸ್ಥಳದಲ್ಲಿ ತಾನಿದ್ದಾನೋ ಅದೇ ಸ್ಥಳದಲ್ಲೇ ಇರು' ಎನ್ನುತ್ತಾರಲ್ಲಾ! ಈಗ ಈ ಸುಖಾಸನದ ಬಳಿ ಇದ್ದೇನೆ. ಹಾಗಾದರೆ ಇಲ್ಲೇ ಇರು ಎಂದು ಇದರ ಅರ್ಥವೇನು? ಇದಕ್ಕೇನು ನಾನು ಇವರನ್ನು ಕೇಳಿದ್ದು? ಇದೇನು ಪರಿಹಾಸ್ಯ!" ಎಂದು ಪರಿತಪಿಸಿದನು. ಆಗ ಒಬ್ಬ ಭಕ್ತರು ಅವನನ್ನು ಹೊರಗೆ ಕರೆದುಹೋಡು ಹೋಗಿ "ಅಯ್ಯಾ! ಭಗವಾನರು ಪರಿಹಾಸ್ಯವಾಗೇ ಹೇಳಿದ್ದರೂ, ಅಥವಾ ದ್ವಂದ್ವಾರ್ಥದಲ್ಲೇ ಹೇಳಿದ್ದರೂ ಅವರ ಮಾತುಗಳಲ್ಲಿ ಯಾವುದೋ ಗಹನವಾದ ಅರ್ಥವೇ ಹುದುಗಿಕೊಂಡಿರುತ್ತದೆ. 'ನಾನು' ಎಂಬ ಅಹಂ ವೃತ್ತಿಯು ಯಾವ ಸ್ಥಳದಿಂದ ಹುಟ್ಟುತ್ತದೋ ಆ ಸ್ಥಳವೇ ತಾನು (ಆತ್ಮನ ನೆಲೆ). ಆ 'ತಾನು' ಇರುವ ಸ್ಥಳವನ್ನು ತಿಳಿದುಕೊಂಡು ತಾನು ತಾನಾಗಿ ನೆಲಸುವುದನ್ನೇ ತಪಸ್ಸು ಎನ್ನುತ್ತಾರೆ. ಆದುದರಿಂದ 'ತಾನು ಯಾರು?' ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯವೇ ಹೊರತು ಒಬ್ಬನು ಯಾವ ಸ್ಥಳದಲ್ಲಿದ್ದರೇನು ಎಂಬುದು ಶ್ರೀಗಳವರ ಆ ಮಾತಿನ ಅರ್ಥ" ಎಂದು ಹೇಳಿ ಆ ಯುವಕನನ್ನು ಸಮಾಧಾನಪಡಿಸಿ ಕಳುಹಿಸಿದರು.

ನಿನ್ನೆಯೂ ಸಹ ಒಬ್ಬರು "ಸ್ವಾಮೀ! ಆತ್ಮನನ್ನು ಅರಿತುಕೊಳ್ಳುವುದು ಹೇಗೆ?" ಎಂದು ಪ್ರಶ್ನಿಸಿದರು. ಭಗವಾನರು "ಆತ್ಮನಲ್ಲೇ ನೀನು ನೆಲಸಿರುವುದು. ಇನ್ನು ಆತ್ಮನನ್ನು ತಿಳಿದಿಲ್ಲ ಎಂದರೇನು?" ಎಂದು ಕೇಳಿದರು. ಅವರು "ಆತ್ಮನಲ್ಲೇ ನೀನು ನೆಲೆಸಿದ್ದೀಯೆ ಎಂದು ತಾವು ಹೇಳುತ್ತಿದ್ದೀರಿ—ಆದರೆ ವಾಸ್ತವವಾಗಿ ಈ ಆತ್ಮನಿರುವುದೆಲ್ಲಿ?" ಎಂದರು. ಭಗವಾನರು "ಅದು ನಿನ್ನ ಹೃದಯದೊಳಗೇ ಇದೆ. ನೀನು ಅದರಲ್ಲಿ ನೆಲೆನಿಂತು ನೋಡಿದರೆ ಅದು ನಿನಗೇ ತಿಳಿಯುತ್ತದೆ" ಎಂದರು. ಅವರು "ನನ್ನ ಹೃದಯದಲ್ಲಿ ನೆಲೆನಿಲ್ಲಲು ನನಗೆ ಅಲ್ಲಿ ಸ್ಥಳವೇ ಇಲ್ಲವಲ್ಲಾ!" ಎಂದರು.

ಭಗವಾನರು ಮುಗುಳುನಗುತ್ತ ಹತ್ತಿರಿದ್ದ ರಾಮಚಂದ್ರಯ್ಯರ್ ಕಡೆ ತಿರುಗಿ ನೋಡಿ "ಇಲ್ಲಿ ನೋಡು—'ಆತ್ಮನು ಎಲ್ಲಿದ್ದಾನೆ? ಎಲ್ಲಿದ್ದಾನೆ?' ಎನ್ನುತ್ತ ಎಲ್ಲರೂ ಹುಡುಕುತ್ತಿರುವವರೇ. ಏನು ಹೇಳೋಣ? ಯಾವುದು ಇದೆಯೋ ಅದೇ ಆತ್ಮವೆಂದು ಕರೆಯಲ್ಪಡುತ್ತದೆ. ಅದು ಸರ್ವತ್ರ ತುಂಬಿಕೊಂಡಿದೆ. ಅದನ್ನೇ ಹೃದಯವೆಂದೂ ಕರೆಯುತ್ತಾರೆ ಎಂದರೆ 'ನನ್ನ ಹೃದಯದಲ್ಲಿ ನಾನು ನೆಲೆಸಲು ಸ್ಥಳವೇ ಇಲ್ಲವಲ್ಲಾ! ಏನು ಮಾಡೋಣ!' ಎನ್ನುತ್ತಾರೆ. ಕೆಲಸಕ್ಕೆ ಬಾರದ ಅನೇಕ ವಾಸನೆಗಳನ್ನು ತನ್ನ ಹೃದಯದಲ್ಲಿ (ಮನಸ್ಸಿನಲ್ಲಿ) ತುಂಬಿಸಿಕೊಂಡು ಅಲ್ಲಿ ಸ್ಥಳವಿಲ್ಲ ಎನ್ನುವುದು ಹೇಗಿದೆ ಎಂದರೆ ಲಂಕೆಯಷ್ಟು ದೊಡ್ಡ ಮನೆ ಇರಲು ತನಗೆ ಕುಳಿತುಕೊಳ್ಳಲು ಸ್ಥಳವಿಲ್ಲ ಎಂದು ಗೊಣಗಿದಹಾಗಿದೆ! ಮನೆಯಲ್ಲಿರುವ ಕೆಲಸಕ್ಕೆ ಬಾರದ ವಸ್ತುಗಳನ್ನೆಲ್ಲ ಆಚೆಗೆ ಎಸೆದರೆ ಆಗ ಸ್ಥಳ ಏಕಿರುವುದಿಲ್ಲ? ತನ್ನ ಶರೀರ ಎಂಬುದೇ ತ್ಯಜಿಸಬೇಕಾದ ಒಂದು ವಸ್ತು. ಇವರುಗಳೆಲ್ಲ ಹೇಗೆಂದರೆ ಕೆಲಸಕ್ಕೆ ಬಾರದ ನಾನಾ ವಸ್ತುಗಳಿಂದ ಮನೆಯನ್ನೆಲ್ಲಾ ತುಂಬಿ ಕೊಂಡು ತನಗೇ ಅಲ್ಲಿ ಮಲಗಲು ಸ್ಥಳವಿಲ್ಲ ಎನ್ನುವ ಜನಗಳಂತೆ. ಇವರು ಹೇಳುವುದು ಹಾಗೆಯೇ. ತನ್ನದಲ್ಲದ ನಾನಾವಿಧವಾದ ವಾಸನಾಸಾಮಗ್ರಿಗಳಿಂದ ಹೃದಯವನ್ನು (ಮನಸ್ಸನ್ನು) ತುಂಬಿಸಿಕೊಂಡು ನಂತರ 'ನಾನು' ಇರಲು ಸ್ಥಳವೇ ಇಲ್ಲ! ಎನ್ನುವರು. ವಾಸನೆಗಳೆಲ್ಲವನ್ನೂ ಸಂಪೂರ್ಣವಾಗಿ ಹೊರ ಹಾಕಿದರೆ ಆಗ ಎಲ್ಲೆಡೆಯಲ್ಲೂ ಅವಕಾಶವೇ. ಎಲ್ಲವೂ ಆತ್ಮನೇ ಅಲ್ಲವೇ! ಆಗ 'ನಾನು' ಎಂಬುದೊಂದು ವಸ್ತು ಪ್ರತ್ಯೇಕವಾಗಿ ಉಳಿಯದು. ಇನ

ಬೇರೆ ಸ್ಥಳವೇಕೆ? ಇರುವವನು ಯಾರು? ಅದನ್ನು ಸರಿಯಾಗಿ ವಿಚಾರಿಸದೆ ಸುಮ್ಮನೆ ಕಣ್ಣು ಮುಚ್ಚಿಕೊಂಡು ಸೂರ್ಯನೇ ಇಲ್ಲ ಎಂಬಂತೆ 'ಸ್ಥಳವಿಲ್ಲ— ಸ್ಥಳವಿಲ್ಲ' ಎನ್ನುತ್ತಾರೆ. ಮಾಡುವುದೇನು?" ಎಂದು ವಿವರಿಸಿದರು.

೫

## ಎಲ್ಲವೂ ಒಂದೇ ಆಗಿರುವ 'ನಾನು'

ನಿನ್ನೆ ಒಬ್ಬ ಸಾಧುಗಳು ಬಂದು ಸಭಾಂಗಣದಲ್ಲಿ ಕುಳಿತುಕೊಂಡರು. ಅವರನ್ನು ನೋಡಿದರೆ ಏನೋ ಪ್ರಶ್ನಿಸುವವರಂತೆ ಕಂಡುಬಂದರು. ಮಧ್ಯಾಹ್ನ ಮೂರು ಗಂಟೆಯ ನಂತರ ಮೆಲ್ಲನೆ ಶ್ರೀಗಳವರ ಬಳಿ ಬಂದು, "ಸ್ವಾಮೀ! ಆತ್ಮನು ಎಲ್ಲೆಲ್ಲೂ ಇದ್ದಾನೆಂದು ಹೇಳುತ್ತಾರಲ್ಲಾ; ಸತ್ತು ಬಿದ್ದಿರುವ ಶವದಲ್ಲೂ ಅವನು ಇರುತ್ತಾನೇನು?" ಎಂದು ಪ್ರಶ್ನಿಸಿದರು. ಭಗವಾನರು "ಓಹೋ! ಅದೋ ನಿಮ್ಮ ಅನುಮಾನ? ಈಗ ಈ ಪ್ರಶ್ನೆ ಸತ್ತುಬಿದ್ದಿರುವ ಶವಕ್ಕೆ ಬಂದಿದೆಯೋ ಅಥವಾ ನಿಮಗೇ ಬಂದಿದೆಯೋ?" ಎಂದು ಪ್ರಶ್ನಿಸಿದರು. ಆಗ ಅವರು "ನನಗೇ" ಎಂದು ಉತ್ತರವಿತ್ತರು.

"ಸುಷುಪ್ತಿ (ಗಾಢನಿದ್ರೆ) ಯಲ್ಲಿ 'ನಾನು ಇದ್ದೇನೆಯೋ ಅಥವಾ ಇಲ್ಲವೇ?' ಎಂಬ ಸಂದೇಹ ನಿಮಗೆ ಬರುತ್ತದೆಯೇನು? ಎಚ್ಚರವಾದ ಮೇಲಲ್ಲವೇ ನಾನು ಇದ್ದೇನೆ ಎಂದು ನೀವು ಹೇಳುತ್ತೀರಿ? ಅದೇ ರೀತಿಯಾಗಿ ಶವದಲ್ಲೂ ಆತ್ಮನಿದ್ದೇ ಇದ್ದಾನೆ. ಸರಿಯಾಗಿ ವಿಚಾರ ಮಾಡಿದರೆ ಸತ್ತ ಶರೀರ ಎಂಬುದಿಲ್ಲ; ಬದುಕಿರುವ ಶರೀರ ಎನ್ನುವುದೂ ಇಲ್ಲ. ಚಲನೆಯೇ ಇಲ್ಲದ ಶರೀರವನ್ನು ಸತ್ತಿದೆ ಎನ್ನುತ್ತೇವೆ; ಚಲಿಸುವ ಶರೀರವನ್ನು ಬದುಕಿದೆ ಎನ್ನುತ್ತೇವೆ, ಅಷ್ಟೇ. ಕನಸಿನಲ್ಲಿ ಸತ್ತ ಶರೀರಗಳನ್ನೂ ಬದುಕಿರುವ ಶರೀರಗಳನ್ನೂ ಎಷ್ಟೋ ನೋಡುತ್ತಿರುತ್ತೇವೆ. ಎಚ್ಚೆತ್ತಮೇಲೆ ಅವುಗಳೆಲ್ಲವೂ ಇಲ್ಲವೇ ಇಲ್ಲ. ಅದೇ ರೀತಿಯಾಗಿ ತೋರುತ್ತಿರುವ ಈ ಚರಾಚರ ಪ್ರಪಂಚವೆಂಬುದು ನಿಜವಾಗಿ ಇಲ್ಲವೇ ಇಲ್ಲ. ಸಾವು ಎಂದರೆ ಅಹಂವೃತ್ತಿಯು ಅಡಗುವುದೇ; ಹುಟ್ಟು ಎಂದರೆ ಅಹಂವೃತ್ತಿಯು ಹುಟ್ಟುವುದೇ. ಇವೇ ಜನನಮರಣಗಳು.

*

ಈ ಜನನಮರಣಗಳು ಕೇವಲ ಅಹಂವೃತ್ತಿಗೇ ಹೊರತು ವಾಸ್ತವವಾಗಿ ನಿಮಗೆ ಇವುಗಳಾವುವೂ ಇಲ್ಲ. ಈ ಅಹಂವೃತ್ತಿ ಇರುವಾಗಲೂ ನೀವಿದ್ದೀರಿ, ಇಲ್ಲದಿರುವಾಗಲೂ ನೀವಿದ್ದೀರಿ. ಈ ವೃತ್ತಿಗೆ ಮೂಲ ನೀವೇ ಹೊರತು, ನೀವು ಈ ವೃತ್ತಿಯಲ್ಲ. ಮುಕ್ತಿ ಎಂದರೆ ಮೇಲೆ ತಿಳಿಸಿದ ಹುಟ್ಟುಸಾವುಗಳ ಮೂಲವನ್ನು ವಿಚಾರಿಸಿ ತಿಳಿದುಕೊಂಡು ಆ ಅಹಂವೃತ್ತಿಯನ್ನು ಬುಡಸಮೇತ ನಾಶ ಮಾಡುವುದು ಎಂದು. ವಾಸ್ತವವಾಗಿ ಅದೇ ಮುಕ್ತಿ; ಎಂದರೆ ಒಬ್ಬನು ಎಚ್ಚರವಾಗಿದ್ದೇ ಸಾಯಬೇಕು ಎಂದರ್ಥ. ಹಾಗೆ ಸತ್ತಾಗ 'ಅಹಂ, ಅಹಂ' ಎಂಬ ಆತ್ಮಸ್ಫುರಣೆಯರೂಪವಾಗಿ ಅಲ್ಲಿಯೇ ಹುಟ್ಟುತ್ತಾನೆ. ಹೀಗೆ ಹುಟ್ಟುವಾತನಿಗೆ ಮತ್ತೆ ಯಾವ ಬಗೆಯ ಸಂದೇಹಗಳೂ ತಲೆದೋರುವುದಿಲ್ಲ' ಎಂದು ಭಗವಾನರು ವಿವರಿಸಿದರು.

ನಾಲ್ಕೈದು ದಿನಗಳ ಕೆಳಗೆ ಇಲ್ಲಿಗೆ ಬಂದಿದ್ದ ಐರೋಪ್ಯ ಯುವಕನೊಬ್ಬನು ನಿನ್ನೆ ಸಂಜೆ ಊರಿಗೆ ಮರಳಿಹೋಗಲು ಗಂಟುಮೂಟೆಗಳನ್ನು ಕಟ್ಟಿಟ್ಟು, ವೇದಪಾರಾಯಣ ಮುಗಿದ ನಂತರ ಶ್ರೀಗಳವರನ್ನು ಸಮೀಪಿಸಿ ಅನೇಕ ಪ್ರಶ್ನೆಗಳನ್ನು ಕೇಳಿದನು. ಭಗವಾನರು ಎಂದಿನಂತೆಯೇ "ನೀನು ಯಾರು? ಹೀಗೆ ಪ್ರಶ್ನಿಸುತ್ತಿರುವವನು ಯಾರು?" ಎಂಬ ಪ್ರಶ್ನೆಗಳ ಮೂಲಕವೇ ಉತ್ತರವಿತ್ತರು. ಕೊನೆಗೆ ಆ ಯುವಕನು, "ಗೀತೆಯಲ್ಲಿ ಭಗವಾನರಿಗೆ ಬಹಳ ಪ್ರಿಯವಾಗಿರುವ ಶ್ಲೋಕ ಯಾವುದು?" ಎಂದು ಪ್ರಶ್ನಿಸಲು ಭಗವಾನರು "ಎಲ್ಲವೂ ಪ್ರಿಯವೇ" ಎಂದರು. ಅವನು ಅಲ್ಲಿಗೂ ಬಿಡದೆ "ಅದರಲ್ಲೂ ಮುಖ್ಯವಾದುದು ಯಾವುದು?" ಎಂದು ಮತ್ತೆ ಪ್ರಶ್ನಿಸಲು ಭಗವಾನರು ಸ್ವಲ್ಪ ತಡೆದು "ಅಹಮಾತ್ಮಾ ಗುಡಾಕೇಶ" (ಅ. 10—ಶ್ಲೋ. 20) ಎಂಬ ಶ್ಲೋಕವನ್ನು ಸೂಚಿಸಿದರು.

ಆ ಯುವಕನು ಸಂತೋಷಹೊಂದಿ ಭಗವಾನರನ್ನು ಬೀಳ್ಕೊಳ್ಳುತ್ತ "ಸ್ವಾಮೀ! ಈ ಅಸತ್ಯವಾದ ನಾನು ಇದೆಯಲ್ಲಾ; ಅದು ಈಗ ಕಾರ್ಯಾಂತರದಿಂದ ಪ್ರಯಾಣ ಮಾಡಬೇಕಾಗಿ ಬಂದಿದೆ. ಈ ಅಸತ್ಯವಾದ ನಾನು ಸತ್ಯವಾದ ಆ ನನ್ನಲ್ಲಿ ಐಕ್ಯವಾಗುವಂತೆ ಶಿಫಾರಸು ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು. ಭಗವಾನರು ಮುಗುಳುನಗುತ್ತ, "ಶಿಫಾರಸು ಮಾಡಲು ಇಷ್ಟೊಂದು 'ನಾನು' ಇದ್ದರಲ್ಲವೇ? ಎಲ್ಲವೂ ಒಂದೇ ನಾನು. ಶಿಫಾರಸು

ಮಾಡಿ ಎನ್ನುವ 'ನಾನು' ಒಬ್ಬ, ಶಿಫಾರಸು ಮಾಡುವ 'ನಾನು' ಎಂಬ ಇನ್ನೊಬ್ಬ, ಅದನ್ನು ಕೇಳುವ 'ನಾನು' ಎಂಬ ಮತ್ತೊಬ್ಬ; ಹೀಗೆ ಇಷ್ಟೊಂದು ಬಗೆಯ 'ನಾನು' ಇಲ್ಲವಲ್ಲಾ! ಎಲ್ಲವೂ ಒಂದೇ ನಾನಾಗಿ ಇದೆಯಲ್ಲಾ! ಇನ್ನು ಯಾರೊಡನೆ ಹೇಳುವುದು ? ಕೇಳುವವನು ಯಾರು ? " ಎಂದರು.

೬

12–9–47

## ಚಿದಾಭಾಸ—ಸ್ವರೂಪ ಸಾಕ್ಷಾತ್ಕಾರ

ಇತ್ತೀಚೆಗೆ ಇಲ್ಲಿಗೆ ಬಂದ ಭಕ್ತನೊಬ್ಬನು ಕೆಲವು ದಿನಗಳಿಂದ ಭಗವಾನರ ಸನ್ನಿಧಿಯಲ್ಲಿ ನಡೆಯುತ್ತಿದ್ದ ಚರ್ಚೆಗಳೆಲ್ಲವನ್ನೂ ಗಮನಿಸುತ್ತಿದ್ದು ಇಂದು ಮಧ್ಯಾಹ್ನ ಶ್ರೀಗಳವರನ್ನು ಸಮೀಪಿಸಿ ನಮ್ರತೆಯಿಂದ, " ಸ್ವಾಮೀ! ಮಾಯಾಪ್ರತಿಬಿಂಬ ಚಿದಾಭಾಸನಾದ ಈಶ್ವರನೇ ಅಂತಃಕರಣ ಪ್ರತಿಬಿಂಬ ಜೀವನಾಗಿದ್ದಾನೆ ಎಂದು ಹೇಳುತ್ತಾರೆ ; ಇದರ ತಾತ್ಪರ್ಯವೇನು ? " ಎಂದು ಕೇಳಿದನು. ಭಗವಾನರು " ಮಾಯೆಯಿಂದ ಪ್ರತಿಬಿಂಬಿತನಾದ ಚಿದಾಭಾಸನನ್ನು ಈಶ್ವರನೆಂದು ಕರೆಯುತ್ತಾರೆ. ಆತನೇ ಅಂತಃಕರಣದಲ್ಲಿ ಪ್ರತಿಬಿಂಬಿತನಾದಾಗ ಜೀವನೆಂದು ಕರೆಯುತ್ತಾರೆ, ಅಷ್ಟೆ" ಎಂದರು. ಆತನು "ಅದು ಸರಿ. ಆದರೆ ಆ ಚಿದಾಭಾಸನೆಂದರೆ ಯಾರು ? " ಎಂದು ಮತ್ತೆ ಕೇಳಿದನು.

ಭಗವಾನರು ತಾಳ್ಮೆಯಿಂದ "ಅದೇ! ಚಿದಾಭಾಸನೆಂದರೆ ಚಿತ್ತ (ಮನಸ್ಸು) ದಲ್ಲಿ ಆಭಾಸವಾಗಿ ತೋರುವ ಅಹಂವೃತ್ತಿ. ಅಂದರೆ ಒಂದಾಗಿ ತೋರುವ ಅಹಂ(ಸತ್ವ)ವೃತ್ತಿಯೇ ರಜಸ್ತಮೋಗುಣಗಳ ಸಂಪರ್ಕದಿಂದ ಮೂರಾಗಿ, ಆ ಮೂರರಿಂದ ಪಂಚಭೂತಗಳು ಉತ್ಪತ್ತಿಯಾಗಿ, ಈ ಪಂಚಭೂತಗಳೇ ಅನೇಕ ಬಗೆಗಳಿಂದ ಕೂಡಿದ ಪ್ರಪಂಚವಾಗಿದೆಯೆಂದು ತಾತ್ಪರ್ಯ. ಇದೇ ಈ ಶರೀರವನ್ನು ನಾನು ಎಂಬುದಾಗಿ ಭ್ರಾಂತಿಯನ್ನು ಕಲ್ಪಿಸುತ್ತದೆ. ಆಕಾಶವೇ ಮೊದಲಾಗಿ ವಿವರಿಸಬೇಕಾಗಿ ಬಂದರೆ ಚಿದಾಕಾಶ, ಚಿತ್ತಾಕಾಶ, ಭೂತಾಕಾಶ ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ಚಿದಾಕಾಶವೆಂಬುದೇ ಜ್ಞಾನಸ್ವರೂಪನಾದ ಆತ್ಮ. ಅದರ ಆಭಾಸ(ಪ್ರತಿಬಿಂಬ)ವೇ

ಚಿತ್ತಾಕಾಶ. ಅಂದರೆ ಅದು ಚಿತ್ತವೇ ಎಂದರ್ಥ. ಆ ಚಿತ್ತವೇ ಮನಸ್ಸು, ಬುದ್ಧಿ ಮತ್ತು ಅಹಂಕಾರವಾಗಿ ಮಾರ್ಪಾಡಾದಾಗ ಅದನ್ನು ಅಂತಃಕರಣ ಎನ್ನುತ್ತಾರೆ. ಕರಣ ಎಂದರೆ ಉಪಕರಣ (ಸಲಕರಣೆ) ಎಂದು ಅರ್ಥ. ಹೊರಗೆ ಕೆಲಸಮಾಡುತ್ತಿರುವ ಕಾಲು, ಕೈ ಮೊದಲಾದುವುಗಳನ್ನು ಬಾಹ್ಯ-ಕರಣಗಳೆಂದೂ, ಒಳಗೆ ಕೆಲಸಮಾಡುತ್ತಿರುವ ಇಂದ್ರಿಯಗಳನ್ನು ಅಂತಃಕರಣಗಳೆಂದೂ ಹೇಳುತ್ತಾರೆ. ಈ ಅಂತಃಕರಣಗಳಿಂದ ಕೂಡಿದ ಚಿದಾಭಾಸನನ್ನೇ ಜೀವನೆಂದು ಕರೆಯುತ್ತಾರೆ. ಸದ್ವಸ್ತುವಾದ ಚಿದಾಕಾಶದ ಆಭಾಸರೂಪವಾದ ಚಿತ್ತಾಕಾಶವೇ ಭೂತಾಕಾಶವನ್ನು ನೋಡುವಾಗ ಅದನ್ನು ಮನೋಆಕಾಶವೆಂದೂ, ವಸ್ತುವನ್ನು ನೋಡುವಾಗ ಚಿನ್ಮಯವೆಂದೂ ಹೇಳುತ್ತಾರೆ. ಅದಕ್ಕೇ 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದು ಹೇಳಿದ್ದಾರೆ. ಆ ಮನಸ್ಸೇ ಎಷ್ಟೋ ಬಗೆಯ ಭ್ರಾಂತಿಗಳನ್ನು ಕಲ್ಪಿಸುತ್ತಿರುತ್ತದೆ" ಎಂದು ವಿವರಿಸಿದರು.

ಈ ಪ್ರಶ್ನೆಯನ್ನು ಕೇಳಿದವರು ಮತ್ತೆ "ಈ ಭ್ರಾಂತಿ ನಮಗೆ ಹೇಗೆ ನಿವಾರಣೆಯಾಗುವುದು?" ಎಂದು ಕೇಳಿದರು. ಭಗವಾನರು "ಮೇಲೆ ಹೇಳಿರುವುದರ ಮರ್ಮವನ್ನು ವಿಚಾರದಿಂದ ಅರಿತಾಗ ಅನೇಕವು (ಬಹುತ್ವವು) ಐದರಲ್ಲೂ, ಆ ಐದು ಮೂರರಲ್ಲೂ, ಆ ಮೂರು ಏಕದಲ್ಲೂ ಲಯಹೊಂದಿ ತಾನು ತಾನಾಗಿಯೇ ಉಳಿದುಕೊಳ್ಳುತ್ತಾನೆ. ತಲೆನೋವು ಬಂದಿದೆ ಎನ್ನಿ: ಔಷಧಿಯಿಂದ ಆ ತಲೆನೋವನ್ನು ನಿವಾರಿಸಿಕೊಂಡರೆ ಆಗ ಹಿಂದಿನಂತೆಯೇ ಸ್ವಸ್ಥನಾಗಿರುತ್ತಾನೆ. ಈ ಶರೀರವನ್ನು ನಾನು ಎಂದು ತಿಳಿಯುವ ಭ್ರಾಂತಿಯೂ ಸಹ ಈ ತಲೆನೋವಿನ ಹಾಗೆಯೇ. ಅದಕ್ಕೆ ವಿಚಾರ ಎಂಬ ಔಷಧಿಯನ್ನು ತೆಗೆದುಕೊಂಡರೆ ಆಗ ಆ ಭ್ರಾಂತಿ ನಿವಾರಣೆಯಾಗಿಬಿಡುತ್ತದೆ" ಎಂದು ತಿಳಿಸಿದರು. ಅದಕ್ಕೆ ಅವರು "ಸ್ವಾಮಿ! ಈ ವಿಚಾರವೆಂಬುದು ಎಲ್ಲರಿಗೂ ಸಾಧ್ಯವಾಗುವುದೇನು?" ಎಂದರು.

ಭಗವಾನರು "ನಿಜ; ಅದು ಪಕ್ವವಾಗಿರುವ ಚಿತ್ತವುಳ್ಳವರಿಗೆ ಮಾತ್ರವೇ ಹೊರತು ಅಪಕ್ವಚಿತ್ತರಿಗಲ್ಲ. ಅಂತಹವರಿಗೆ ಜಪ, ತಪ, ವಿಗ್ರಹಾರಾಧನೆ, ಪ್ರಾಣಾಯಾಮವೇ ಮೊದಲಾದ ಯೋಗಗಳು, ಜ್ಯೋತಿಷ್ಟೋಮವೇ ಮೊದಲಾದ ಯಾಗಕರ್ಮಗಳು ಇವುಗಳನ್ನು

ಹೇಳಿದ್ದಾರೆ. ಈ ಕರ್ಮಗಳನ್ನು ಮಾಡುವುದರ ಮೂಲಕ ಪಕ್ವಚಿತ್ತರಾಗಿ ನಂತರ ವಿಚಾರಮಾರ್ಗದಿಂದ ಸತ್ಸ್ವರೂಪನಾಗಿರುವ ತಮ್ಮನ್ನು ತಾವು ಅರಿತುಕೊಳ್ಳುತ್ತಾರೆ. ಈ ಅಪಕ್ವಚಿತ್ತರ ಪ್ರಾಪಂಚಿಕ ದೃಷ್ಟಿಯನ್ನು ಹೋಗಲಾಡಿಸಲು ಪ್ರಪಂಚವನ್ನು ಮಿಥ್ಯೆ, ಮಾಯೆ ಎಂದೂ, ಅವರ ಶರೀರ ದೃಷ್ಟಿಯನ್ನು ಹೋಗಲಾಡಿಸಲು ನೀನು ಶರೀರ ಅಲ್ಲವೆಂದೂ ಹೇಳಬೇಕಾಗಿ ಬರುತ್ತದೆ. ಪಕ್ವಚಿತ್ತರಿಗಾದರೋ ಆತ್ಮನು ನಿನಗಿಂತ ಬೇರೆಯಲ್ಲ, ಎಲ್ಲವೂ ನೀನೇ ಆಗಿರುವೆ ಎಂದು ಹೇಳಿದರೆ ಸಾಕು. ಅಪಕ್ವಚಿತ್ತರಿಗೆ ಅನ್ನಮಯಾದಿ ಪಂಚಕೋಶಗಳನ್ನು ಯುಕ್ತಿಗಳ ಮೂಲಕ ವಿಚಾರಿಸಿ ನೇತಿ ನೇತಿ (ಇದಲ್ಲ, ಇದಲ್ಲ) ಎಂಬ (ಶ್ರುತಿ) ವಾಕ್ಯಗಳಿಂದ ಅವುಗಳನ್ನು ಅಲ್ಲಗಳೆದು ಇವುಗಳಿಗಿಂತ ವಿಲಕ್ಷಣವಾಗಿರುವ ಸಾಕ್ಷಿಸ್ವರೂಪನಾಗಿರುವವನನ್ನು ಅರಿತುಕೊಳ್ಳಬೇಕೆಂದು ತಿಳಿಸುತ್ತಾರೆ. ಹಾಗೆ ತಿಳಿಸಿಹೇಳಿ ನಂತರ ಮತ್ತೆ ನಾನಾಬಗೆಯ ಅನೇಕ ಆಭರಣಗಳೆಲ್ಲವೂ ಕೇವಲ ಚಿನ್ನವೇ ಹೊರತು ಚಿನ್ನಕ್ಕಿಂತ ಬೇರೆಯಲ್ಲ; ಅದರಂತೆಯೇ ಈ ಪಂಚಕೋಶಗಳೂ ಸಹ ನಿನಗಿಂತ ಬೇರೆಯಲ್ಲ ಎಂದು ಹೇಳುತ್ತಾರೆ. ಆದುದರಿಂದ ಈ ಜಗತ್ತನ್ನು ಸತ್ಯವೆಂದೇ ಹೇಳಬೇಕಾಗಿ ಬರುತ್ತದೆ. ನಾನಾ ಬಗೆಯ ಆಭರಣಗಳ ರೂಪರಚನೆಗಳನ್ನು ಬೇರೆಯವರು ಗಮನಿಸುತ್ತಾರೆಯೇ ಹೊರತು ಅಕ್ಕಸಾಲಿಗನು ಅದನ್ನು ಗಮನಿಸುತ್ತಾನೆಯೇ? ಅವನು ಅವುಗಳಲ್ಲಿರುವ ಚಿನ್ನವನ್ನು ಮಾತ್ರವೇ ಗಮನಿಸುತ್ತಾನೆ. ಹಾಗೆಯೇ ಜ್ಞಾನಿಯ ದೃಷ್ಟಿಯಲ್ಲಿ ಎಲ್ಲವೂ ತಾನಾಗಿಯೇ ಕಂಡುಬರುತ್ತದೆ. ಶಂಕರಾಚಾರ್ಯರು ಹೇಳಿದ್ದು ಇದನ್ನೇ. ಕೆಲವರು ಇದನ್ನು ಸರಿಯಾಗಿ ಗ್ರಹಿಸದೆ ಅವರನ್ನು ಮಿಥ್ಯಾವಾದಿಗಳು ಎಂದು ಆರೋಪಿಸುತ್ತಾರೆ. ಅದು ತಿಳಿಯದೆ ಹೇಳುವ ಮಾತು. ಕಲ್ಲಿನಲ್ಲಿ ಕೆತ್ತಿರುವ ನಾಯಿಯ ಆಕೃತಿಯನ್ನು ಒಬ್ಬನು ಕಾಣುವಾಗ 'ನಾಯಿಯನ್ನು ಕಂಡಾಗ ಕಲ್ಲಿಲ್ಲ; ಕಲ್ಲನ್ನು ಕಂಡಾಗ ನಾಯಿ ಇಲ್ಲ' ಎಂಬ ನಾಣ್ಣುಡಿಯಂತೆ 'ನಾನು' ಎಂಬುವನು ಇದ್ದರೆ ಮಾತ್ರ ಎಲ್ಲವೂ ಇವೆ. 'ನಾನು' ಎಂಬುವನು ಇಲ್ಲದಿದ್ದರೆ ಇವು ಯಾವುವೂ ಇಲ್ಲ. ಕಲ್ಲನ್ನು ಕಂಡಾಗ ನಾಯಿ ಇಲ್ಲ ಎಂದರೆ ಒಬ್ಬನು ಅಲ್ಲಿ ಕಲ್ಲನ್ನು ಕಾಣುವಾಗ ನಾಯಿ ಅಲ್ಲಿಂದ ಪರಾರಿಯಾಯಿತೆಂದು ಅರ್ಥವಲ್ಲ. ಅದಕ್ಕೆ ಒಂದು ಕಥೆ ಇದೆ. ಅದೇನೆಂದರೆ ಒಬ್ಬನು ರಾಜನ ಅರಮನೆಯನ್ನು

ನೋಡಬೇಕೆಂದು ಬಯಸಿ ಅರಮನೆಯ ಮಹಾದ್ವಾರದ ಬಳಿಗೆ ಬರ ಅದರ ಎರಡು ಪಾರ್ಶ್ವಗಳಲ್ಲೂ ಕಲ್ಲಿನಲ್ಲಿ ಕೆತ್ತಿದ್ದ ನಾಯಿಗಳನ್ನು ದ ದಿಂದಲೇ ನೋಡಿ, ಅವು ನಿಜವಾದ ನಾಯಿಗಳೆಂದೇ ಭ್ರಮಿಸಿ ಹೆದರಿಬಿಟ್ಟ ಆಗ ಅದೇ ದಾರಿಯಾಗಿ ಹೋಗುತ್ತಿದ್ದ ಸಾಧುವೊಬ್ಬನು ಅವನನ್ನು ನೊ ಕನಿಕರದಿಂದ 'ಹೆದರಬೇಡ. ನನ್ನೊಡನೆ ಬಾ' ಎಂದು ಅವುಗಳ ಹತ್ತಿ ಅವನನ್ನು ಕರೆದುಕೊಂಡು ಹೋಗಿ ತೋರಿಸಲು ಅವು ಕೇವಲ ಕಲ್ಲಿ ಕೆತ್ತಿರುವ ನಾಯಿಗಳು ಎಂದು ಅರಿವಾದಾಗ ಅವನು 'ಅಯ್ಯೋ! ಇ ಬರಿಯ ಕಲ್ಲು!' ಎಂದು ಉದ್ಗರಿಸಿದನಂತೆ. ಈಗ ನೋಡಿದಾಗ ಅವ ಅಲ್ಲಿ ನಾಯಿ ಕಾಣಿಸಲಿಲ್ಲ. ಆಗ ನೋಡಿದಾಗ ಅಲ್ಲಿ ಕಲ್ಲು ಕಾಣಿಸಲಿ ಹೀಗೆಯೇ ಒಬ್ಬನು ಈ ಜಗತ್ತನ್ನು ಕಾಣುವಾಗ ಆತ್ಮನು ಕಾಣಿಸನ ಆತ್ಮನನ್ನು ಕಾಣುವಾಗ ಜಗತ್ತು ಕಾಣಿಸದು. ಸದ್ಗುರುವಾದವ ಆ ಸಾಧುವಿನಂತೆ. ಅವನ ಸಹಾಯದಿಂದ ನಿಜವನ್ನು ಅರಿತ ಜ್ಞಾನಿ ತನ್ನ ಶರೀರವೂ ತಾನಾಗಿಯೇ (ಆತ್ಮನಾಗಿಯೇ) ಕಾಣುತ್ತದೆ. ಆದ ಒಂದು ವಿಷಯ; ಪ್ರತಿಕ್ಷಣವೂ ಮರಣವು ಸನ್ನಿಹಿತವಾಗಿರುವಂತೆ ನಮ ಕಂಡ ಹೊರತು ಸ್ವಸ್ವರೂಪವು ಗೋಚರಿಸುವುದಿಲ್ಲ. ಅಂದರೆ ಸಮಸ್ತ ವಾಸನೆಗಳ ಸಹಿತ ಈ ಅಹಂ ಎಂಬುದು ಸಾಯಬೇಕು ಎಂದು ಅರ್ಥ ಹಾಗೆ ಈ ಅಹಂಕಾರ ನಿರ್ಮೂಲವಾಗಿ ನಾಶವಾದಾಗ ಆ ಸತ್ಯವಾದ ತಾನು ತಾನಾಗಿಯೇ ಪ್ರಕಾಶಿಸುತ್ತಿರುತ್ತಾನೆ. ಹೀಗೆ ಮಹಾಪುರುಷರು ಜನನಮರಣರಹಿತವಾದ ನಿರ್ವಾಣಪದವಿಯಲ್ಲಿ ಸದಾ ನೆಲೆಸಿರುತ್ತಾರೆ" ಎಂದು ವಿಶದಪಡಿಸಿ ವಿರಮಿಸಿದರು.

೭

13–9–47

## ನಿರಾಡಂಬರ

ಇತ್ತೀಚೆಗೆ ಅರವಿಂದಬೋಸ್ ಬೆಂಗಳೂರಿನಿಂದ ಬರುವಾಗ ಹೆಚ್ಚು ಬೆಲೆಯ ಕೆಲವು ಸೀಸದ ಕಡ್ಡಿ (ಪೆನ್ಸಿಲ್) ಗಳನ್ನು ಕೊಂಡು ತಂದು

ಭಗವಾನರಿಗೆ ಅರ್ಪಿಸಿ ನಮಸ್ಕರಿಸಿ, ಕುಶಲಪ್ರಶ್ನೆಗಳಿಗೆ ಉತ್ತರಿಸಿದ ನಂತರ 'ಮಹಾಪ್ರಸ್ಥಾನ' ಎಂಬ ಹೆಸರಿನಲ್ಲಿ ಕಟ್ಟಿಸಿದ್ದ ತಮ್ಮ ಬಂಗಲೆಗೆ ತೆರಳಿದರು.

ಅವರು ಅತ್ತಹೋದನಂತರ ಭಗವಾನರು ಆ ಸೀಸದಕಡ್ಡಿಗಳನ್ನು ಅತ್ತಿತ್ತ ತಿರುಗಿಸಿ ಬರೆದುನೋಡಿ ಅವುಗಳ ಹಿರಿಮೆಯನ್ನು ಹೊಗಳಿ ಕೃಷ್ಣಸ್ವಾಮಿಯ ಕೈಗೆ ಕೊಡುತ್ತ "ಇವುಗಳನ್ನು ಜೋಪಾನವಾಗಿ ತೆಗೆದಿಡು, ಹುಷಾರು! ನಮ್ಮ ಸ್ವಂತ ಸೀಸದಕಡ್ಡಿಯು ಇಲ್ಲೇ ಎಲ್ಲೋ ಇರಬೇಕು ಅದನ್ನು ಹುಡುಕಿ ತೆಗೆದುಕೊಂಡು ಬಾ" ಎಂದರು. ಕೃಷ್ಣಸ್ವಾಮಿ ಅವುಗಳನ್ನು ಎತ್ತಿಟ್ಟು ಭಗವಾನರ ಪಕ್ಕದ ಮೇಜಿನಮೇಲಿದ್ದ ಮರದ ಸಣ್ಣ ಪೆಟ್ಟಿಗೆಯನ್ನು ತೆರೆದು ಹುಡುಕಿ ಇನ್ನೊಂದು ಒಳ್ಳೆಯ ಸೀಸದಕಡ್ಡಿಯನ್ನು ಹೊರತೆಗೆದು ಭಗವಾನರಿಗೆ ಕೊಟ್ಟನು.

ಭಗವಾನರು ಅದನ್ನೂ ಮತ್ತೆ ಮತ್ತೆ ತಿರುಗಿಸಿ ನೋಡಿ "ಇದು ಯಾಕಯ್ಯಾ! ಇದು ದೇವರಾಜ ಮೊದಲಿಯಾರದು. ನಮ್ಮ ಸ್ವಂತದ್ದೇ ಒಂದು ಇರಬೇಕಲ್ಲವೆ? ಅದನ್ನು ತಾ; ಇದನ್ನೂ ಜೋಪಾನವಾಗಿ ಎತ್ತಿಡು" ಎಂದರು. ಕೃಷ್ಣಸ್ವಾಮಿಯು ಅದನ್ನು ಅಲ್ಲಿ ಎಷ್ಟು ಹುಡುಕಿದರೂ ಸಿಗಲಿಲ್ಲ. ಆಗ ಭಗವಾನರು "ಅದು ಸಭಾಂಗಣದಲ್ಲಿ ಎಲ್ಲಿಯಾದರೂ ಇದೆಯೇನೋ ಹುಡುಕಿನೋಡಿ" ಎಂದರು. ಆಗ ಒಬ್ಬರು ಅದನ್ನು ಸಭಾಂಗಣದಲ್ಲಿ ಎಲ್ಲ ಕಡೆಯಲ್ಲೂ ಹುಡುಕಿ "ಸಿಗಲಿಲ್ಲ" ಎಂದರು. ಭಗವಾನರು "ಅಯ್ಯಯ್ಯೋ! ಅದು ನಮ್ಮ ಸ್ವಂತದ ಸೀಸದಕಡ್ಡಿಯಾಯಿತಲ್ಲಾ! ಎಲ್ಲಿ ಹೋಯಿತೋ ಏನೋ! ಇನ್ನೂ ಸ್ವಲ್ಪ ಸರಿಯಾಗಿ ಹುಡುಕಿನೋಡಿ" ಎಂದರು. ಆಗ ಅಲ್ಲಿಯೇ ಕುಳಿತಿದ್ದ ದೇವರಾಜ ಮೊದಲಿಯಾರ್ "ಇದೇನು ಭಗವಾನ್? ಇವೆಲ್ಲವೂ ನಿಮ್ಮ ಸ್ವಂತದ್ದೇ ಅಲ್ಲವೇನು?" ಎಂದು ಕೇಳಿದರು.

ಭಗವಾನರು ನಗುತ್ತಲೇ "ಅದು ಹಾಗಲ್ಲ, ಇದನ್ನು ನೀವು ಕೊಟ್ಟಿದ್ದೀರಿ. ಅವುಗಳನ್ನು ಬೋಸ್ ತಂದಿದ್ದಾರೆ. ಇವುಗಳೆಲ್ಲವೂ ಹೆಚ್ಚು ಬೆಲೆಯ ವಸ್ತುಗಳು. ನಾವೇನಾದರೂ ಅಜಾಗ್ರತೆಯಿಂದಿದ್ದರೆ ಯಾರಾದರೂ ಅವುಗಳನ್ನು ತೆಗೆದುಕೊಂಡುಹೋಗಿಬಿಡುತ್ತಾರೆ. ಏಕೆಂದರೆ, ಸ್ವಾಮಿಯು ಎಲ್ಲರಿಗೂ ಸೇರಿದವರೇ ಅಲ್ಲವೇ? ಆಗ ನೀವುಗಳು 'ನಾವು ಅಷ್ಟೊಂದು ಬೆಲೆಕೊಟ್ಟು ಭಗವಾನರಿಗೆಂದು ತಂದಿದ್ದೆವಲ್ಲಾ; ಅದನ್ನು

ಇವರು ಕಳೆದುಬಿಟ್ಟಿದ್ದಾರಲ್ಲಾ!' ಎಂದು ಬೇಸರಪಡಬಹುದು; ಅದೆಲ್ಲವೂ ಏಕೆ? ನಮ್ಮ ಸ್ವಂತದ್ದಾದರೆ ಅದನ್ನು ಎಲ್ಲಿಟ್ಟರೂ ಬಾಧಕವಿಲ್ಲ. ಅದರ ಬೆಲೆ ಕೇವಲ ಅರ್ಧಾಣೆ. ಅದೂ ಸಹ ಕೊಂಡುತಂದದ್ದೇನಲ್ಲ. ಎಲ್ಲಿಯೋ ಸಿಕ್ಕಿತೆಂದು ಅದನ್ನು ಯಾರೋ ಒಬ್ಬರು ಇಲ್ಲಿಗೆ ತಂದುಕೊಟ್ಟರು. ಹಾಗಾಗಿ ಅದು ನಮ್ಮ ಸ್ವಂತದ್ದಾಯಿತು. ಇತರ ಸೀಸದಕಡ್ಡಿಗಳ ವಿಷಯವಾಗಿ ನಾವು ಉತ್ತರ ಹೇಳಬೇಕಾಗಿ ಬರುತ್ತದೆ. ಇದನ್ನಾದರೋ ಏನಾಯಿತೆಂದು ಯಾರೂ ಕೇಳುವವರಿಲ್ಲ. ಆದುದರಿಂದಲೇ ಅದನ್ನೇ ಕೊಡಿ ಎಂದು ಹೇಳುತ್ತಿದ್ದೇನೆ. ಅಲ್ಲದೆ ಈ ಬಗೆಯ ವಸ್ತುಗಳು ದೊಡ್ಡ ಮನುಷ್ಯರು ಉಪಯೋಗಿಸುವಂತಹುದು. ಇವುಗಳು ನಮಗೇಕೆ? ನಾವೇನಾದರೂ ಇದರಲ್ಲಿ ಬರೆದು ದೊಡ್ಡದೊಡ್ಡ ಪರೀಕ್ಷೆಗಳನ್ನು ಪಾಸು ಮಾಡಬೇಕೇನು? ಅಥವಾ ಏನಾದರೂ ದೊಡ್ಡ ಉದ್ಯೋಗ ಮಾಡಬೇಕೇನು? ನಮ್ಮ ಬರವಣಿಗೆಗೆ ಇದು ಸಾಕು" ಎಂದು ತಿಳಿಸಿ ಕೊನೆಗೂ ಆ ಹಳೆಯ ಸೀಸದಕಡ್ಡಿಯನ್ನು ಹುಡುಕಿಸಿ ತರಿಸಿಕೊಂಡರು.

ಕೆಲವು ಕಾಲದ ಹಿಂದೆ ಇಂತಹುದೇ ಒಂದು ಸಂಗತಿ ನಡೆಯಿತು. ಶ್ರೀಮಂತರೊಬ್ಬರು ಒಂದು ಬೆಳ್ಳಿಯ ಬಟ್ಟಲು, ಅದನ್ನಿಡುವ ಬಟ್ಟಲು ತಟ್ಟೆ (Saucer) ಮತ್ತು ಒಂದು ಚಮಚೆ, ಈ ಮೂರನ್ನೂ ಆಶ್ರಮದ ಕಛೇರಿಯ ಅಧಿಕಾರಿಗಳ ಒಪ್ಪಿಗೆ ಪಡೆದು ಶ್ರೀಗಳವರಿಗೆ ಅರ್ಪಿಸುತ್ತ "ಭಗವಾನರು ಬಿಸಿ ಪಾನೀಯವನ್ನೇನಾದರೂ ಕುಡಿಯಬೇಕಾದಾಗ ದಯಮಾಡಿ ಇವುಗಳನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ" ಎಂದು ಪ್ರಾರ್ಥಿಸಿದರು. ಭಗವಾನರು ಅವುಗಳನ್ನು ತೆಗೆದುಕೊಂಡು ನೋಡಿ, ನಂತರ ಪರಿಚಾರಕನ ಕೈಗಳಿಗೆ ಕೊಟ್ಟರು. ಆಗಂತುಕರು ಹೊರಟುಹೋದನಂತರ ಪರಿಚಾರಕನು ಅವುಗಳನ್ನು ಅಲ್ಲೇ ಇದ್ದ ಕಪಾಟಿನಲ್ಲಿ ಇಡಲು ಹೋದಾಗ ಭಗವಾನರು ಆತನನ್ನು ತಡೆದು "ಅದನ್ನು ಅಲ್ಲಿ ಏಕೆ ಇಡುತ್ತಿದ್ದೀಯೆ? ಆಶ್ರಮದ ಕಛೇರಿಯಲ್ಲೇ ಇಟ್ಟುಕೊಂಡಿರುವಂತೆ ತಿಳಿಸು" ಎಂದರು. ಆಗ ಅಲ್ಲಿದ್ದ ಭಕ್ತರೊಬ್ಬರು "ಭಗವಾನರ ಉಪಯೋಗಕ್ಕೆಂದಲ್ಲವೇ ಇವುಗಳನ್ನು ಕೊಟ್ಟಿರುವುದು?" ಎಂದರು. ಭಗವಾನರು, "ಸರಿಹೋಯಿತು! ಇವು ಶ್ರೀಮಂತರು ಉಪಯೋಗಿಸುವ ವಸ್ತುಗಳು. ನಮಗೇಕೆ? ಹಾಗೆ ಬೇಕಾದರೆ

ನಮ್ಮ ಸ್ವಂತದ್ದೇ ಬಟ್ಟಲು, ತಟ್ಟೆ ಮತ್ತು ಚಮಚಗಳಿಲ್ಲವೇನು? ಅವುಗಳನ್ನೇ ಉಪಯೋಗಿಸಬಹುದು. ಇವು ನಮಗೇಕೆ?" ಎಂದು ಹೇಳಿ ಆ ಪರಿಚಾರಕನತ್ತ ನೋಡಿ, "ನೋಡು, ನಾಳೆಯಿಂದ ನಮ್ಮ ಸ್ವಂತ ಬಟ್ಟಲನ್ನೇ ಉಪಯೋಗಿಸೋಣ, ಅದನ್ನು ಹೊರಗೆ ತೆಗೆದಿಡು" ಎಂದರು. ಆಗ ಆ ಭಕ್ತರು ಕುತೂಹಲದಿಂದ "ನಿಮ್ಮ ಸ್ವಂತ ಬಟ್ಟಲೇ! ಅದು ಯಾವುದು?" ಎಂದು ಪ್ರಶ್ನಿಸಿದರು.

ಭಗವಾನರು "ಅದೇ? ತೆಂಗಿನಕಾಯಿನ ಚಿಪ್ಪುಗಳ ಮೇಲಿನ ನಾರುಗಳನ್ನು ತೆಗೆದು ಅವುಗಳನ್ನು ಮೆರುಗು ಬರುವಂತೆ ನಯಮಾಡಿ ಇಟ್ಟುಕೊಂಡಿದ್ದೇನೆ. ಅವುಗಳೇ ನಮ್ಮ ಬಟ್ಟಲುಗಳೂ ಮತ್ತು ಚಮಚಗಳೂ. ಅವು ನಮ್ಮ ಸ್ವಂತದ್ದು. ಅವುಗಳು ನಮ್ಮ ಉಪಯೋಗಕ್ಕೆ ಸಾಕು. ಇವುಗಳನ್ನು ಜೋಪಾನವಾಗಿ ಎತ್ತಿಡಬೇಕೆಂದು ಕಛೇರಿಯಲ್ಲಿ ತಿಳಿಸು" ಎಂದರು. ಆಗ ಆ ಭಕ್ತರು "ಇವು ಮಾತ್ರ ಭಗವಾನರದು ಅಲ್ಲವೇನು?" ಎಂದು ಕೇಳಿದರು. ಭಗವಾನರು ನಗುತ್ತ "ಅದು ಸರಿ, ಆದರೆ ಈ ಆಡಂಬರವೆಲ್ಲ ನಮಗೇಕೆ ಹೇಳಿ! ಅವು ಬಹಳ ಬೆಲೆ ಬಾಳುವ ವಸ್ತುಗಳು. ಅಜಾಗ್ರತೆಯಿಂದೇನಾದರೂ ಇದ್ದರೆ ಅದನ್ನು ಯಾರಾದರೂ ತೆಗೆದುಕೊಂಡು ಹೋಗಿಬಿಡುತ್ತಾರೆ. ಆದುದರಿಂದ ಅವುಗಳನ್ನು ಯಾವಾಗಲೂ ಎಚ್ಚರಿಕೆಯಿಂದ ಕಾಪಾಡಬೇಕು. ಸ್ವಾಮಿಗೆ ಅದೇ ಕೆಲಸವೇನು? ಅಷ್ಟೇ ಅಲ್ಲ! ಯಾರಾದರೂ, 'ನಮ್ಮ ಸ್ವಾಮಿಗಳೇ ಅಲ್ಲವೇ, ಕೇಳಿದರೆ ಕೊಡರೇನು?' ಎಂದು ಭಾವಿಸಿ ನಮ್ಮನ್ನು ಕೇಳಬಹುದು. ಆಗ ನಾವು ಇಲ್ಲ ಎನ್ನಲು ಸಾಧ್ಯವಿಲ್ಲ. ಏನಾದರೂ ಕೊಟ್ಟೆವೋ, 'ಸ್ವಾಮಿಗಳಿಗೆ ಎಂದು ಕೊಟ್ಟರೆ ಅವರು ಇವುಗಳನ್ನು ಬೇರಾರಿಗೋ ಕೊಟ್ಟುಬಿಟ್ಟರಲ್ಲಾ!' ಎಂದು ಅದನ್ನಿತ್ತವರು ಬೇಜಾರು ಮಾಡಿಕೊಳ್ಳಬಹುದು. ಇದೆಲ್ಲವೂ ಏಕೆ? ನಮ್ಮ ಸ್ವಂತ ಬಟ್ಟಲುಗಳನ್ನಾದರೋ ಹೇಗೆ ಉಪಯೋಗಿಸಿದರೂ ಸರಿ, ಅದನ್ನು ಏನು ಮಾಡಿದರೂ ಸರಿ, ಏನೂ ಪರವಾಗಿಲ್ಲ. ಯಾರಿಗೂ ಬೇಸರವಿಲ್ಲ" ಎಂದು ಹೇಳಿ ಆ ಬೆಳ್ಳಿಯ ಪಾತ್ರೆಗಳನ್ನು ಕಳುಹಿಸಿ, ತಮ್ಮ ಸ್ವಂತ ಬಟ್ಟಲುಗಳನ್ನು ಹೊರಕ್ಕೆ ತೆಗೆಸಿ ಎಲ್ಲರಿಗೂ ತೋರಿಸಿದರು.

ಸುಮಾರು ಈ ಕಾಲದಲ್ಲೇ ದೊಡ್ಡ ಉದ್ಯೋಗದಲ್ಲಿದ್ದ ಭಕ್ತರೊಬ್ಬರು

ತಮ್ಮ ಊರಿನಿಂದ ಭಗವಾನರ ಸನ್ನಿಧಿಗೆ ಬಂದಾಗ ಬೆಳ್ಳಿಯ ಹಿಡಿಯನ್ನು ಹಾಕಿದ ಊರುಗೋಲೊಂದನ್ನು ತಂದು ಭಗವಾನರಿಗೆ ಸಮರ್ಪಿಸಿದರು. ಭಗವಾನರು ಅದನ್ನು ಅತ್ತ ಇತ್ತ ತಿರುಗಿಸಿನೋಡಿ "ಭೇಷ್! ಬಹಳ ಸೊಗಸಾಗಿದೆ. ಜೋಪಾನವಾಗಿ ನೋಡಿಕೊಳ್ಳಿ" ಎನ್ನುತ್ತ ಅದನ್ನು ಅವರಿಗೇ ಹಿಂತಿರುಗಿಸಿಕೊಟ್ಟರು. ಆಗ ಅವರು "ಅಯ್ಯೋ! ಭಗವಾನರು ಸ್ವೀಕರಿಸಲೆಂದು ಇದನ್ನು ತಂದಿದ್ದೇನೆ, ಭಗವಾನರೇ ಉಪಯೋಗಿಸಬೇಕು" ಎಂದು ಬೇಡಿಕೊಂಡರು. ಭಗವಾನರು "ಸರಿಹೋಯಿತು. ಬೆಳ್ಳಿ ಹಿಡಿ ಇರುವ ಠೀವಿಯ ಊರುಗೋಲನ್ನು ನಿಮ್ಮಂತಹ ಅಧಿಕಾರಿಗಳು ಉಪಯೋಗಿಸಬೇಕೇ ಹೊರತು ಅದು ನನ್ನಂತಹವರಿಗೇಕೆ? ಅದೋ ನೋಡಿ! ನನ್ನ ಸ್ವಂತ ಊರುಗೋಲು! ಅದು ಸಾಕು" ಎಂದು ಉತ್ತರವಿತ್ತರು.

ಇನ್ನೊಬ್ಬ ಭಕ್ತರು, "ಅದು ಹಾಳಾದ ನಂತರ ಇದನ್ನು ಉಪಯೋಗಿಸಬಹುದಲ್ಲಾ?" ಎಂದರು. ಭಗವಾನರು "ಈ ಆಡಂಬರಗಳೆಲ್ಲವೂ ನಮಗೇಕೆ? ಒಂದು ಮರದ ಕೋಲನ್ನು ಕೆತ್ತಿದ ತಕ್ಷಣವೇ ನಮ್ಮ ಊರುಗೋಲು ಸಿದ್ಧ. ಅದು ನಮ್ಮ ಮೂರನೆಯ ಕಾಲು. ನಮ್ಮ ಶರೀರ ಎಂಬ ಕಟ್ಟಿಗೆಗೆ ಈ ಊರುಗೋಲು ಕಟ್ಟಿಗೆಯೇ ಸಹಾಯ. ಬೆಟ್ಟದ ಮೇಲಿದ್ದಾಗ ಮರಗಳ ಕೊಂಬೆಗಳನ್ನು ಕತ್ತರಿಸಿ ನಯಮಾಡಿ ಎಷ್ಟೋ ಊರುಗೋಲುಗಳನ್ನು ತಯಾರು ಮಾಡುತ್ತಿದ್ದೆ. ಅವುಗಳಿಗೆ ಬಿಡಿಗಾಸೂ ಖರ್ಚಿಲ್ಲ. ಅವುಗಳನ್ನು ಎಷ್ಟೋ ಮಂದಿ ತೆಗೆದುಕೊಂಡುಹೋದರು. ನಮಗೆ ಅವು ಸ್ವಂತದ್ದು. ಈ ಆಡಂಬರಗಳೆಲ್ಲ ನಮಗೇಕೆ? ನಾವೇನು ಉದ್ಯೋಗ ಮಾಡಬೇಕೇನು? ನಮಗೆ ಅದು ಸಾಕು" ಎಂದು ಹೇಳಿ ಆ ಊರುಗೋಲನ್ನು ಅವರಿಗೇ ಹಿಂದಿರುಗಿಸಿದರು.

ಭಗವಾನರು ನಿರಾಡಂಬರದ ವಸ್ತುಗಳಲ್ಲದೆ ಬೇರೆ ಯಾವುದನ್ನೂ ಉಪಯೋಗಿಸುವುದಿಲ್ಲ. ಅದರಲ್ಲೂ ಕಾಸು ಖರ್ಚಿಲ್ಲದ ವಸ್ತುಗಳೆಂದರೆ ಅವರಿಗೆ ಬಹಳ ಮೆಚ್ಚಿಕೆ.

೮

14–9–47

## ಮಾತೆಯ ಪ್ರಸಾದ

ಕಳೆದ ತಿಂಗಳು ನಿರಂಜನಾನಂದ ಸ್ವಾಮಿಗಳು ಮಧುರೆ ಮೀನಾಕ್ಷಿ ಅಮ್ಮನವರ ದೇವಾಲಯಕ್ಕೆ ಕಾಣಿಕೆಯಾಗಿ ಈ ಆಶ್ರಮದಲ್ಲೇ ಹುಟ್ಟಿ ಬೆಳೆದ ಎತ್ತೊಂದನ್ನು ಕಳುಹಿಸಿಕೊಟ್ಟರು. ಅಲ್ಲಿ ಅದಕ್ಕೆ 'ಬಸವ' ಎಂದು ನಾಮಕರಣ ಮಾಡಿ ಅಲಂಕರಿಸಿ ಇಲ್ಲಿಂದ ಅದನ್ನು ಕರೆದುಕೊಂಡು ಹೋಗಿದ್ದ ಸಾಂಬಶಿವಯ್ಯರೊಡನೆ ಅದರ ಛಾಯಾಚಿತ್ರವನ್ನು ತೆಗೆಸಿ ಆ ಚಿತ್ರವನ್ನೂ ಹಿಂದಿನ ಕಾಲದ ಪಟ್ಟೆಶಾಲೊಂದನ್ನೂ, ವಿಭೂತಿ ಕುಂಕುಮವೇ ಮೊದಲಾದ ಪ್ರಸಾದಗಳ ಸಮೇತ ಅಯ್ಯರೊಡನೆ ಆಶ್ರಮಕ್ಕೆ ಕಳುಹಿಸಿಕೊಟ್ಟರು.

ಸ್ವತಂತ್ರ ದಿನಾಚರಣೆಯ ದಿನವಾದ ಆಗಸ್ಟ್ 15 ರಂದು ಜನಸಂದಣಿ ಹೆಚ್ಚಾಗುವ ನಿಮಿತ್ತ ಭಗವಾನರು ಇಡೀ ಹಗಲನ್ನು ಜೂಬಿಲಿ ಸಭಾಂಗಣ ದಲ್ಲಿಯೇ ಕಳೆಯುತ್ತಿದ್ದರು. ಇಂದು ಬೆಳಿಗ್ಗೆ ನಾನು ಅಲ್ಲಿಗೆ ಹೋದಾಗ ಭಗವಾನರು ವಿರಾಮವಾಗಿ ಕುಳಿತಿದ್ದರು. ಆಗ ದೊಡ್ಡ ತಟ್ಟೆಯೊಂದರಲ್ಲಿ ಶಾಲು, ಕುಂಕುಮ, ವಿಭೂತಿ ಮೊದಲಾದ ಪ್ರಸಾದಗಳ ಸಮೇತ ಸಾಂಬಶಿವಯ್ಯರ್ ಅಲ್ಲಿಗೆ ಬಂದರು. ಅವರ ಹಿಂದೆಯೇ ಬಂದ ಶ್ರೋತ್ರಿಯ ಬ್ರಾಹ್ಮಣರು 'ನ ಕರ್ಮಣಾ ನ ಪ್ರಜಯಾ ಧನೇನ....' ಮೊದಲಾದ ವೇದ ಮಂತ್ರಗಳನ್ನು ಪಠಿಸಿದರು. ನಾವೆಲ್ಲರೂ ಭಗವಾನರಿಗೆ ನಮಸ್ಕರಿಸಿ ಎದ್ದು ನಿಂತೆವು. ಆಗ ಭಗವಾನರು ನನ್ನೆಡೆ ನೋಡಿ, "ಇಲ್ಲಿನ ಎತ್ತೊಂದನ್ನು ಮೀನಾಕ್ಷಿ ದೇವಾಲಯಕ್ಕೆ ಕಳುಹಿಸಿದ್ದರು, ಗೊತ್ತೇನು ?" ಎಂದು ಕೇಳಿದರು. ನಾನು "ಗೊತ್ತು. ಅದನ್ನು ಇಲ್ಲಿಂದ ಕಳುಹಿಸಿಕೊಟ್ಟ ದಿನ ಅದನ್ನು ಅರಿಸಿನ, ಕುಂಕುಮವೇ ಮೊದಲಾದ ಮಂಗಳದ್ರವ್ಯಗಳಿಂದ ಅಲಂಕರಿಸಿದ್ದನ್ನು ಕಂಡು ಗೋಶಾಲೆಯ ಮುಖ್ಯಸ್ಥರನ್ನು ವಿಚಾರಿಸಿ ಸಮಾಚಾರ ತಿಳಿದುಕೊಂಡೆ" ಎಂದೆ.

ಅವರು ತಂದ ತಟ್ಟೆಯನ್ನು ಭಗವಾನರು ಭಕ್ತಿಪೂರ್ವಕವಾಗಿ ಸ್ವೀಕರಿಸಿ ವಿಭೂತಿ ಮತ್ತು ಕುಂಕುಮಗಳನ್ನು ಹಣೆಯಲ್ಲಿ ಧರಿಸಿ, "ಇದೋ ! ಇದು

ಮಾತೆ ಮೀನಾಕ್ಷಿಯ ಪ್ರಸಾದ" ಎಂದು ಹೇಳುತ್ತಿರುವಾಗಲೇ ಅವರ ಗಂಟಲು ಕಟ್ಟಿತು. ಅಷ್ಟರಲ್ಲಿ ಸಾಂಬಶಿವಯ್ಯರ್ ಆ ಶಾಲನ್ನು ಭಗವಾನರ ಪಾದಗಳಿಗೆ ಹೊದಿಸಿದರು. ಕೂಡಲೆ ಭಗವಾನರು ಭಕ್ತಿಭರಿತರಾಗಿ ಸಾದರ ದಿಂದ ಅದನ್ನು ತಮ್ಮ ಕೈಗಳಲ್ಲಿ ಎತ್ತಿಕೊಂಡರು. ಪರಿಚಾರಕನು ಅದನ್ನು ಭಗವಾನರಿಂದ ತೆಗೆದುಕೊಂಡು ಅವರ ಸುಖಾಸನದ ಬೆನ್ನಿಗೆ ಹರಡಿದನು. ಭಗವಾನರು ಆ ಶಾಲಿನ ಮೇಲೆ ತಮ್ಮ ಕೈಗಳನ್ನು ಮೃದುವಾಗಿ ಆಡಿಸುತ್ತ ನನ್ನೆಡೆಗೆ ತಿರುಗಿ, "ಮಾತೆ ಮೀನಾಕ್ಷಿ ಇದನ್ನು ಕಳುಹಿಸಿಕೊಟ್ಟಿದ್ದಾಳೆ, ಮಾತೆಯ ಪ್ರಸಾದ" ಎನ್ನುತ್ತ ಮುಂದೇನೂ ಮಾತನಾಡಲಾಗದೆ ಮೌನ ವಾಗಿಬಿಟ್ಟರು. ಕಣ್ಣುಗಳು ಆನಂದಬಾಷ್ಪದಿಂದ ತೊಯ್ದು ಸ್ನಿಗ್ಧವಾದುವು. ಅವರ ಶರೀರವೂ ಸ್ಥಿರವಾಗಿಬಿಟ್ಟಿತು. ಈ ದೃಶ್ಯವನ್ನು ಕಂಡಾಗ ಇಡೀ ಪ್ರಕೃತಿಯಲ್ಲಿ ಪ್ರಶಾಂತಿಯು ಆವರಿಸಿರುವಂತೆ ತೋರಿತು. ಆಗ ನಾನು ಸುತ್ತಲೂ ತಿರುಗಿ ನೋಡಲು ಎಲ್ಲರ ಕಣ್ಣುಗಳೂ ತುಂಬಿಬಂದಿವೆ!

ಭಗವಾನರು ಚಿಕ್ಕವರಾಗಿದ್ದಾಗ ತಿರುಚ್ಚುಳಿಯ ಮನೆಯಲ್ಲಿ ಯಾರೋ ಒಬ್ಬರು ಅವರ ಮೇಲೆ ಕೋಪಿಸಿಕೊಳ್ಳಲು ಅವರು ಭೂಮಿನಾಥೇಶ್ವರ ದೇವಾಲಯಕ್ಕೆ ಓಡಿ ಬಂದು ಮಾತೆ ಸಹಾಯಾಂಬಾ ದೇವಿಯ ಮುಂದೆ ಕುಳಿತುಕೊಂಡು ಕಣ್ಣೀರು ಸುರಿಸಿದರಂತೆ. ಆಗ ಮಾತೆ ಅವರನ್ನು ಯಾವ ರೀತಿ ಸಂತೈಸಿದಳೋ ಮತ್ತು ಏನು ಭರವಸೆಯನ್ನಿತ್ತಳೋ ಅದು ಅವರಿಗೆ ಮಾತ್ರವೇ ಗೊತ್ತು. ಮೂರು ವರ್ಷಗಳ ಕೆಳಗೆ ವೈದ್ಯರು ಭಗವಾನರ ಶರೀರಾರೋಗ್ಯಕ್ಕೆ ಕುಟ್ಟಿದಕ್ಕಿಯ ಅನ್ನ ಒಳ್ಳೆಯದೆಂಬ ಅಭಿಪ್ರಾಯವನ್ನು ಕೊಟ್ಟಾಗ ಆಶ್ರಮವಾಸಿಗಳೆಲ್ಲರೂ ಭಗವಾನರು ಅದರಂತೆ ಅನುಸರಿಸಬೇಕೆಂದು ಮನವಿಮಾಡಲು ಭಗವಾನರು "ಆಶ್ರಮವಾಸಿಗಳಿಗೆಲ್ಲರಿಗೂ ನೀವು ಕುಟ್ಟಿದ ಅಕ್ಕಿಯ ಅನ್ನವನ್ನೇ ಬಡಿಸಬಲ್ಲಿರೋ?" ಎಂದು ಕೇಳಿದರು. ಆಗ ಅವರುಗಳು "ಅದು ಸಾಧ್ಯವಾಗದು. ಭಗವಾನರಿಗೆ ಮಾತ್ರವೇ ಸ್ವಲ್ಪ ಮಾಡಿಕೊಡಬಹುದು; ಇದಕ್ಕೆ ಭಗವಾನರು ಸಮ್ಮತಿಸಬೇಕು" ಎಂದು ಪ್ರಾರ್ಥಿಸಲು ಭಗವಾನರು ಅದನ್ನು ಒಪ್ಪಿಕೊಳ್ಳಲಿಲ್ಲ. ಕೊನೆಗೆ ಭಕ್ತರು "ಮಾತೆಯ ದೇವಸ್ಥಾನದಲ್ಲಿ ನೈವೇದ್ಯಕ್ಕೆಂದು ಪ್ರತ್ಯೇಕವಾಗಿ ಅನ್ನವನ್ನು

ಮಾಡುತ್ತಾರೆ. ಅದನ್ನು ಕುಟ್ಟಿದ ಅಕ್ಕಿಯಲ್ಲೇ ಮಾಡುತ್ತೇವೆ. ಅದನ್ನು ಮಾತೆಯ ಪ್ರಸಾದರೂಪವಾಗಿಯಾದರೂ ದಯಮಾಡಿ ತಾವು ಸ್ವೀಕರಿಸ ಬೇಕು" ಎಂದು ಪ್ರಾರ್ಥಿಸಿದರು. ಆಗ ಭಕ್ತಪರಾಧೀನರಾದ ಭಗವಾನರು ಮಣಿದು "ನಿಮ್ಮಿಷ್ಟದಂತೆಯೇ ಆಗಲಿ. ಅದು ಮಾತೆಯ ಪ್ರಸಾದವಾದ ಕಾರಣ ತೆಗೆದುಕೊಳ್ಳುತ್ತೇನೆ" ಎಂದು ಸಮ್ಮತಿಸಿದರು. ಅಂದಿನಿಂದ ಮಾತೆಯ ಪ್ರಸಾದವಾದ ಆ ಅನ್ನವನ್ನು ಭಗವಾನರಿಗೆ ಬಡಿಸಿ ಉಳಿದುದನ್ನು ಪಂಕ್ತಿಯಲ್ಲಿ ಕುಳಿತವರೆಲ್ಲರಿಗೂ ಸ್ವಲ್ಪಸ್ವಲ್ಪ ಬಡಿಸುತ್ತಿರುತ್ತಾರೆ.

ಕಳೆದ ಬೇಸಗೆಯಲ್ಲಿ ರಾಮಸ್ವಾಮಿ ಅಯ್ಯರ ಮಗನಿಗೆ ಮದುವೆ ಆಯಿತು. ಆ ಕಾರಣವಾಗಿ ಅವರು ಆಶ್ರಮವಾಸಿಗಳಿಗೆ ಭಿಕ್ಷೆಯನ್ನು ಇತ್ತರು. ಅಂದಿನ ಊಟದಲ್ಲಿ ಎಲ್ಲರ ಎಲೆಯ ಮೇಲೂ ಮಲ್ಲಿಗೆಯ ಅರಳಿನಂತಹ ಮೃದುವಾದ ಬಿಳಿಯ ಸಣ್ಣಕ್ಕಿ ಅನ್ನ ; ಭಗವಾನರ ಎಲೆಯಲ್ಲಿ ಮಾತ್ರ ಒರಟಾದ ಕಂದುಬಣ್ಣದ ದಪ್ಪಕ್ಕಿ ಅನ್ನ. ಇದನ್ನು ನೋಡಿದ ಅಯ್ಯರ್ ಪರಿಚಾರಕರನ್ನು "ಇದೇನು? ಭಗವಾನರಿಗೆ ಈ ಕಂದುಬಣ್ಣದ ದಪ್ಪ ಅನ್ನವನ್ನು ಬಡಿಸಿದ್ದೀರಲ್ಲಾ!" ಎಂದು ಕೇಳಿದರು. ಆಗ ಭಗವಾನರು ಮುಗುಳು ನಗುತ್ತ "ಅಪ್ಪಾ! ಇದು ಮಾತೆಯ ಪ್ರಸಾದ. ಇದೇನಾಗಿದೆ? ಮಾತೆಯ ನೈವೇದ್ಯಕ್ಕೆಂದು ಇದನ್ನು ಪ್ರತ್ಯೇಕವಾಗಿ ಅಡಿಗೆ ಮಾಡುತ್ತಾರೆ" ಎನ್ನುತ್ತ ಮೇಲಿನ ವಿವರವೆಲ್ಲವನ್ನೂ ತಿಳಿಸಿ "ಆಕೆಯ ಪ್ರಸಾದವಾದ ಕಾರಣ ನಾನು ಇದಕ್ಕೆ ಸಮ್ಮತಿಸಿದೆ" ಎಂದು ವಿವರಿಸಿದರು.

"ದೇವಸ್ಥಾನ ಯಾವುದು? ದೇವರು ಯಾರು? ಪ್ರಸಾದವೆಂದರೇನು? ಇವೆಲ್ಲವನ್ನೂ ಮೀರಿದ ಅತೀತ ಸ್ಥಿತಿಯನ್ನು ನಾವು ಮುಟ್ಟಿಬಿಟ್ಟಿದ್ದೇವೆ" ಎಂಬುದಾಗಿ ಹೇಳುತ್ತಿರುವವರಿಗೆ ಭಗವಾನರ ಈ ವರ್ತನೆ ಒಂದು ಪಾಠವಲ್ಲವೇ?

16-9-47

## ಚಿತ್ತ ಶಾಂತಿಯೇ ಮೋಕ್ಷ

ಮೊನ್ನೆ ಆಂಧ್ರ ಯುವತಿಯೊಬ್ಬಳು ತನ್ನ ಗಂಡನೊಡನೆ ಭಗವಾನರ ಬಳಿ ಬಂದು "ಸ್ವಾಮೀ! ನಾನು ಸ್ವಲ್ಪ ಕಾಲ ವೇದಾಂತ ಶ್ರವಣವನ್ನೂ ಮಾಡಿದ್ದೇನೆ ಮತ್ತು ಅಲ್ಪಸ್ವಲ್ಪ ಧ್ಯಾನವನ್ನೂ ಮಾಡುತ್ತಿರುತ್ತೇನೆ. ಧ್ಯಾನದ ಕಾಲದಲ್ಲಿ ಒಂದೊಂದು ಬಾರಿ ನನಗೆ ಆನಂದವಾಗಿ ಕಣ್ಣುಗಳಲ್ಲೂ ಸಹ ನೀರು ಸುರಿಯುತ್ತದೆ. ಆದರೆ ಕೆಲವು ಬಾರಿ ಏನೂ ಆಗುವುದೇ ಇಲ್ಲ. ಇದಕ್ಕೇನು ಕಾರಣ?" ಎಂದು ಪ್ರಶ್ನಿಸಿದಳು. ಭಗವಾನರು ಮುಗುಳು ನಗುತ್ತ "ಆನಂದವೆಂಬುದು ಯಾವಾಗಲೂ ಇರುವುದೇ ಹೊರತು ಒಂದು ಬಾರಿ ತೋರಿ ಮತ್ತೊಂದು ಬಾರಿ ಮಾಯುವಾಗುವಂತಹುದು ಅಲ್ಲವಲ್ಲಾ! ಹೀಗೆ ಬಂದುಹೋಗುವುದೆಲ್ಲವೂ ಕೇವಲ ನಮ್ಮ ಮನಸ್ಸಿನ ಕಲ್ಪನೆಯೇ. ಅವುಗಳನ್ನು ಲಕ್ಷ್ಯವೇ ಮಾಡಬಾರದು" ಎಂದರು. ಅದಕ್ಕೆ ಆಕೆ "ಭಾವಪರವಶತೆಯನ್ನು ಉಂಟುಮಾಡುವ ಆ ಆನಂದಾನುಭವವಾದನಂತರ ಮತ್ತೆ ಮತ್ತೆ ಅದೇ ಅನುಭವ ಬೇಕು ಎಂದೇ ಆಸೆಯಾಗುತ್ತದೆ" ಎಂದು ಉತ್ತರವಿತ್ತರು.

ಭಗವಾನರು "ಆ ಆನಂದವಿರುವಾಗಲೂ ನೀನು ಇದ್ದೆ, ಅದು ಇಲ್ಲದಿರುವಾಗಲೂ ನೀನಿರುವೆ ಎಂದು ನೀನು ಒಪ್ಪಿಕೊಳ್ಳುತ್ತೀಯೆ, ಅಲ್ಲವೇನು? ಆ ನಿನ್ನನ್ನು ನೀನು ಸರಿಯಾಗಿ ಅರಿತುಕೊಂಡರೆ ಇವು ಯಾವುವೂ ನಿನ್ನ ಲಕ್ಷ್ಯಕ್ಕೇ ಬರುವುದಿಲ್ಲ" ಎಂದರು. ಆಗ ಮತ್ತೊಬ್ಬರು "ಅದಕ್ಕೆ ಏನಾದರೂ ಒಂದು ಪಟ್ಟು ನಮಗೆ ಸಿಗಬೇಕಲ್ಲವೆ?" ಎಂದರು. "ಪ್ರತ್ಯೇಕವಾಗಿ ಒಂದು ಇದ್ದರಲ್ಲವೇ ಪಟ್ಟು ಸಿಗಲು? ಎಲ್ಲವೂ ತಾನೇ ಆಯಿತಲ್ಲಾ! ಆದುದರಿಂದ ಪಟ್ಟು ಹಿಡಿದುಕೊಳ್ಳುವವರು ಯಾರು? ಯಾವುದನ್ನು ಪಟ್ಟು ಹಿಡಿದುಕೊಳ್ಳಬೇಕು?" ಎಂದು ಭಗವಾನರು ಪ್ರಶ್ನಿಸಲು, ಯಾರೂ ಮಾತಾಡಲಿಲ್ಲ. ಭಗವಾನರು ತಮ್ಮ ಕೃಪಾದೃಷ್ಟಿಯನ್ನು ಎಲ್ಲೆಡೆ ಬೀರಿ "ಹ್ಞೂಂ! ವಾಸನೆಗಳು ಅಷ್ಟು ಪ್ರಬಲ; ಏನು ಮಾಡುವುದು?" ಎಂದರು.

ಇಷ್ಟರಲ್ಲಿ ಆಗತಾನೆ ಬಂದು ಕುಳಿತುಕೊಂಡ ಯುವಕನೊಬ್ಬನು ಸಣ್ಣ ಚೀಟಿಯೊಂದನ್ನು ಬರೆದು ಶ್ರೀಗಳವರಿಗೆ ಕೊಟ್ಟನು. ಅವರು ಅದನ್ನು ಓದಿ ನೋಡಿ ಹತ್ತಿರವಿದ್ದವರೊಡನೆ "ಇಲ್ಲಿ ನೋಡು, ಚಿತ್ತಶಾಂತಿಯೇ ಮೋಕ್ಷ ಅಲ್ಲವೆ? ಎಂದು ಇದರಲ್ಲಿ ಕೇಳಿದ್ದಾರೆ. ಉತ್ತರ ಆ ಪ್ರಶ್ನೆಯಲ್ಲೇ ಅಡಗಿದೆ. ಇನ್ನು ಪ್ರತ್ಯೇಕವಾಗಿ ಉತ್ತರಿಸಲು ಏನಿದೆ? ಚಿತ್ತ ಎಂದರೇನು ಎಂಬುದನ್ನು ತಿಳಿದುಕೊಂಡು ಈ ಪ್ರಶ್ನೆಯನ್ನು ಕೇಳುತ್ತಿದ್ದಾರಲ್ಲವೇ?" ಎಂದರು. ಆಗ ಅಲ್ಲಿದ್ದವರಲ್ಲಿ ಒಬ್ಬರು ಆ ಯವಕನನ್ನು "ನಿಮಗೆ ಚಿತ್ತ ಎಂದರೇನು ಎಂಬುದು ಗೊತ್ತು, ಅಲ್ಲವೇ?" ಎಂದು ಕೇಳಿದರು.

ಆ ಯುವಕನು "ಮನಸ್ಸು" ಎಂದು ಉತ್ತರಿಸಿದನು. ಭಗವಾನರು "ಸರಿ. ಆ ಮನಸ್ಸಿಗೆ ಶಾಂತಿ ಲಭಿಸುವುದನ್ನೇ ಮೋಕ್ಷ ಎಂದು ನಿಮ್ಮ ಪ್ರಶ್ನೆಯಲ್ಲೇ ತಿಳಿಯುತ್ತಿದೆಯಲ್ಲಾ; ಇನ್ನೇನು?" ಎಂದರು. ಆಗ ಆ ಯುವಕನು "ಆ ಮನಸ್ಸು ಕೆಲವು ಬಾರಿ ಚಂಚಲವಾಗಿ ಇರುವುದಲ್ಲಾ! ಆ ಚಿತ್ತಚಾಂಚಲ್ಯವು ಬಾರದಂತೆ ಮಾಡುವುದು ಹೇಗೆ?" ಎಂದು ಪ್ರಶ್ನಿಸಿದನು. "ಯಾರ ಮನಸ್ಸಿಗೆ ಈ ಚಂಚಲತೆ? ಹೀಗೆ ಪ್ರಶ್ನಿಸುತ್ತಿರುವವನು ಯಾರು?" ಎಂದು ಭಗವಾನರು ಕೇಳಲು, ಆತನು "ನನ್ನ ಮನಸ್ಸಿಗೇ; ಪ್ರಶ್ನಿಸುತ್ತಿರುವವನೂ ನಾನೇ" ಎಂದನು.

ಆಗ ಭಗವಾನರು "ಓ ಅದೋ ಸಮಾಚಾರ! ಹಾಗಾದರೆ ನಾನು ಎಂಬುವವನೊಬ್ಬ ಇದ್ದಾನಲ್ಲವೇ? ಆಗಾಗ ಶಾಂತಿಯನ್ನು ನೀನು ಅನುಭವಿಸುತ್ತಿರುವುದರಿಂದ ಶಾಂತಿ ಎಂಬುದೂ ಇದೆ ಎಂದು ನೀನು ಒಪ್ಪಿಕೊಳ್ಳದಿರಲು ಸಾಧ್ಯವಿಲ್ಲ. ಆಸೆಗಳೂ ಸಹ ಮನಸ್ಸಿನದೇ. ಯಾವ ಆಸೆಗಳೂ ಇಲ್ಲದಂತೆ ಮಾಡಿಕೊಂಡರೆ ಆಗ ಮನಸ್ಸಿನ ಚಂಚಲತೆ ತಾನಾಗಿಯೇ ಹೊರಟುಹೋಗುತ್ತದೆ. ಚಂಚಲತೆ ಇಲ್ಲದಿದ್ದರೆ ಮನಸ್ಸಿನಲ್ಲಿ ಕೇವಲ ಶಾಂತಿಯೇ ಇರುವುದು. ಹೀಗಿರುವುದನ್ನು ಹೊಂದಲು ಬೇರೆ ಪ್ರಯತ್ನವೇನೂ ಬೇಕಾಗಿಲ್ಲ. ಆಸೆಗಳು ಬಾರದಂತೆ ಮಾಡಿಕೊಳ್ಳುವುದಕ್ಕೇ ಎಲ್ಲ ಪ್ರಯತ್ನವೂ. ವಿಷಯವಸ್ತುಗಳ ಕಾರಣದಿಂದ ಮನಸ್ಸಿಗೆ ಚಂಚಲತೆ ಉಂಟಾದಾಗಲೆಲ್ಲ, ಆಯಾ ವಿಷಯವಸ್ತುಗಳಿಂದ ಮನಸ್ಸನ್ನು ಹಿಂದಕ್ಕೆ ಸೆಳೆದುಕೊಳ್ಳಬೇಕು. ಈ ರೀತಿಯಾಗಿ

ಮಾಡಿದರೆ ಆಗ ಉಳಿಯುವುದು ಕೇವಲ ಶಾಂತಿಯೊಂದೇ. ಅದೇ ಆತ್ಮ ಅದೇ ಮೋಕ್ಷ, ಅದೇ ನಾನು" ಎಂದು ವಿವರಿಸಿದರು.

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ |
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ||
(ಗೀ-ಅ-6-ಶ್ಲೋ. 26

ತಾತ್ಪರ್ಯ: ಚಂಚಲವೂ, ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯದ ದೆಸೆಯಿಂದ ಹೊರಗೆ ಬರುವುದೋ ಆಯಾ ವಿಷಯದಿಂದ ಮನಸ್ಸನ್ನು ನಿಗ್ರಹಿಸಿ ಆತ್ಮನಲ್ಲಿಯೇ ವಶಪಡಿಸಿಕೊಳ್ಳಬೇಕು.

೧೦

20-9-4

## ಅರುಣಾಚಲ

ನಾಲ್ಕೈದು ದಿನಗಳ ಹಿಂದೆ ಗಿರಿಪ್ರದಕ್ಷಿಣೆಗೆ ಹೋಗುತ್ತಿದ್ದ ಕೆಲವು ಮಂದಿ ಭಕ್ತರು ನನ್ನನ್ನೂ ಜತೆಗೆ ಕರೆದಾಗ ನಾನು ಭಗವಾನರ ಅನುಮತಿ ಪಡೆದು ಅವರೊಡನೆ ಹೊರಟೆ. ಅಡಿಅಣ್ಣಾಮಲೆಯನ್ನು ನಾವು ತಲುಪುವ ಸಮಯಕ್ಕೆ ಸರಿಯಾಗಿ ಮಳೆಯು ಶುರುವಾಗಲು ರಸ್ತೆಯ ಸಮೀಪದಲ್ಲೇ ಇದ್ದ ಒಂದು ಚಿಕ್ಕ ಮಠದಲ್ಲಿ ಕುಳಿತುಕೊಂಡೆವು. ಆಗ ಅಲ್ಲಿಯೇ ವಾಸವಾಗಿದ್ದ ಸಾಧುವಿನೊಡನೆ ನಾನು "ಈ ಮಠವು ಯಾರದು?" ಎಂದು ಕೇಳಿದೆ. ಆತನು "ಮಾಣಿಕ್ಯವಾಚಕರದು" ಎಂದು ಉತ್ತರವಿತ್ತನು. "ಇದು ಇಲ್ಲಿ ಯಾವ ಕಾರಣಕ್ಕಾಗಿ ಸ್ಥಾಪಿಸಲ್ಪಟ್ಟಿತು?" ಎಂದು ನಾನು ಕೇಳಿದಾಗ ಆತನು ಯಾವುದೋ ಒಂದು ಕಥೆಯನ್ನು ಹೇಳಿದನು. ಅದು ನನಗೆ ಅಷ್ಟೇನೂ ಸಮಾಧಾನವನ್ನು ತರಲಿಲ್ಲ. ಆಗ ಭಗವಾನರಿಗೆ ಇದನ್ನು




ಮನನಮಾಡಿಕೊಂಡರೆ ಸರಿಯಾಗಿ ತಿಳಿದುಕೊಳ್ಳಬಹುದೆಂದು ಭಾವಿಸಿ ಆತನ ಮಾತಿಗೆ ತಲೆದೂಗುತ್ತ ಸುಮ್ಮನಿದ್ದೆ.

ಸಮಯವನ್ನು ನೋಡಿ ಶ್ರೀಗಳವರನ್ನು ಕೇಳಬೇಕು ಎಂದುಕೊಳ್ಳುತ್ತಿರುವಾಗಲೇ ನಿನ್ನೆ ಅವರು ಬ್ರಹ್ಮವೈವರ್ತಪುರಾಣದಲ್ಲಿ ಅಂತರ್ಗತವಾದ ಕಾಳೀಶ್ವರಮಾಹಾತ್ಮ್ಯದಲ್ಲಿನ ಸುಂದರಮೂರ್ತಿಯ ಕಥೆಯನ್ನು ಓದುತ್ತ ಕುಳಿತಿದ್ದರು. ಸುಂದರಮೂರ್ತಿಗಳು ಕಾಳೀಶ್ವರ ದೇವಾಲಯವನ್ನು ಪ್ರವೇಶಿಸುವುದಕ್ಕಾಗಿ ಎದುರಿಗೇ ಇದ್ದ ಗಜಪುಷ್ಕರಿಣಿಯಲ್ಲಿ ಸ್ನಾನಮಾಡುವುದಕ್ಕೆಂದು ನೀರಿನಲ್ಲಿ ಮುಳುಗಿ ಏಳುವ ಸಮಯಕ್ಕೆ ಸರಿಯಾಗಿ ದೇವಸ್ಥಾನವೇ ಅದೃಶ್ಯವಾಗುವುದೂ, ಅದನ್ನು ಕಂಡು ಅವರು "ಮೊದಲು ನಿನ್ನ ಬಳಿಸಾರಿ ನಿನ್ನನ್ನು ಸೇವಿಸದ ಕಾರಣ ಈ ಶಿಕ್ಷೆಯು ದೊರಕಿತೇನು?" ಎಂಬರ್ಥ ಬರುವ ಹಾಡನ್ನು ಹಾಡಿದಾಗ, ಮರಳಿ ದೇವಸ್ಥಾನವು ಕಾಣಿಸಿಕೊಂಡಿದ್ದು ಮೊದಲಾದ ಕಥಾಭಾಗದವರೆಗೆ ಓದಿ, ಭಗವಾನರು ನನ್ನೊಡನೆ "ಅವರಿಗೆ (ಸುಂದರಮೂರ್ತಿಗಳಿಗೆ) ಮೊದಲು ಎಲ್ಲವೂ ಜಲಮಯವಾಗಿ ತೋರಿ ನಂತರ ಜ್ಯೋತಿರ್ಮಯವಾಗಿ ಕಾಣಿಸಿತಂತೆ" ಎಂದರು.

ಆಗೊಬ್ಬ ಭಕ್ತರು "ಈ ಅರುಣಾಚಲವನ್ನೂ ಜ್ಯೋತಿಸ್ವರೂಪವೇ ಎಂದು ಹೇಳುತ್ತಾರಲ್ಲವೇ?" ಎಂದು ಪ್ರಶ್ನಿಸಿದರು. ಭಗವಾನರು "ಹೌದು, ಈ ಭೌತಿಕ ಕಣ್ಣುಗಳಿಗೆ ಮಾತ್ರ ಶಿಲೆಯರೂಪವೇ ಹೊರತು ನಿಜವಾಗಿ ಇದು ಜ್ಯೋತಿಸ್ವರೂಪವೇ" ಎಂದರು. ಇದೇ ಸಮಯವನ್ನು ಕಾಯುತ್ತಿದ್ದ ನಾನು "ಅಡಿಅಣ್ಣಾಮಲೆಯಲ್ಲಿ ಮಾಣಿಕ್ಯವಾಚಕರ ಮಠ ಎಂದು ಒಂದು ಮಠವಿದೆಯಲ್ಲವೇ, ಅದಕ್ಕೆ ಆ ಹೆಸರು ಬರಲು ಏನು ಕಾರಣ?" ಎಂದು ಕೇಳಿದೆನು. ಭಗವಾನರು "ಅದೇ! ಮಾಣಿಕ್ಯವಾಚಕರು ಅನೇಕ ತೀರ್ಥಕ್ಷೇತ್ರಗಳ ಸಂದರ್ಶನ ಮಾಡುತ್ತ ಇಲ್ಲಿಗೂ ಬಂದರಂತೆ. ಆಗ ಆ ಸ್ಥಳದಲ್ಲಿ ನೆಲೆಸಿ ಅರುಣಾಚಲ ಶಿಖರವನ್ನು ನೋಡುತ್ತ 'ತಿರುವೆಣ್ಬಾವೈ' (ಇದು ಅರುಣಾಚಲೇಶ್ವರನ ಸನ್ನಿಧಿಯಲ್ಲಿ ಧನುರ್ಮಾಸದಲ್ಲಿ ಹಾಡುವ ಸುಪ್ರಭಾತ ಗೀತೆ) ಹಾಡುಗಳನ್ನೂ 'ಅಮ್ಮಾನೇ' (ಇದು ಚೆಂಡಾಟದ ಹಾಡು) ಎನ್ನುವ ಹಾಡುಗಳನ್ನೂ ಹಾಡಿದರಂತೆ. ಆದುದರಿಂದ ಆ ಮಠವನ್ನು ಅದೇ ಸ್ಥಳದಲ್ಲಿ ನಿರ್ಮಿಸಿದ್ದಾರೆ ಎಂದು ಹೇಳುತ್ತಾರೆ. ನೀವು ಆ ತಿರುವೆಣ್ಬಾವೈನಲ್ಲಿ

ಕೆಲವನ್ನು ಕೇಳಿದ್ದೀರಿ ಅಲ್ಲವೇ? ಹಾಗೆಯೇ ಶ್ರೀಮತಿ ಆಂಡಾಳ್ ಶ್ರೀಕೃಷ್ಣ ನನ್ನು ಕುರಿತಾದ ಮೂವತ್ತು ಹಾಡುಗಳನ್ನು (ತಿರುವೆಂಬಾವೈ) ಹಾಡಿದ್ದಾಳೆ. ಅದೇ ರೀತಿಯಾಗಿ ಮುರುಗನಾರೂ ಇಲ್ಲಿನ ವಿಷಯವನ್ನು ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾರೆ" ಎಂದರು.

"ಈ ಗಿರಿಗೆ 'ಅಣ್ಣಾಮಲೆ' ಎಂಬ ಹೆಸರೇಕೆ ಬಂತು?" ಎಂದು ಒಬ್ಬರು ಪ್ರಶ್ನಿಸಿದರು. ಭಗವಾನರು "ಬ್ರಹ್ಮ, ವಿಷ್ಣುಗಳಿಗೆ ಅಂದದ (ನಿಲುಕದ) ಮಲೆ (ಬೆಟ್ಟ)ಯೇ ಅಣ್ಣಾಮಲೆ. ಅಂದರೆ ವಾಕ್ಕು ಮತ್ತು ಮನಸ್ಸಿಗೆ ನಿಲುಕದ್ದು; 'ಅವಾಙ್ಮನಸಗೋಚರ' ಎಂದರ್ಥ. ಅಂದದ (ನಿಲುಕದ) ಮಲೆ—ಅಣ್ಣಾಮಲೆ. ಆ ಹೆಸರಿನ ಕಾರಣ ಅದೇ" ಎಂದು ಉತ್ತರವಿತ್ತರು. ಆ ಭಕ್ತರು "ಆದರೆ ಈ ಗಿರಿಗೆ ಒಂದು ರೂಪವಿದೆಯಲ್ಲಾ?" ಎಂದರು. ಭಗವಾನರು "ಬ್ರಹ್ಮ, ವಿಷ್ಣುಗಳ ಎದುರು ಗೋಚರಿಸಿದಾಗ ಅದು ಒಂದೇ ಜ್ಯೋತಿಸ್ತಂಭವಾಗಿ ಎಲ್ಲೆಡೆಯಲ್ಲೂ ಆವರಿಸಿ ನಿಂತಿರುವಂತೆ ಕಂಡಿತು. ಬೆಟ್ಟದಂತೆ ಕಂಡಿದ್ದು ನಂತರ ಅಲ್ಲವೇ? ಇದು ಈಶ್ವರನ ಸ್ಥೂಲರೂಪ; ಜ್ಯೋತಿಸ್ವರೂಪ ಸೂಕ್ಷ್ಮರೂಪ; ಇವೆಲ್ಲವನ್ನೂ ಮೀರಿದ ಸ್ವರೂಪ ಯಾವುದೋ ಅದೇ ಯಥಾರ್ಥಸ್ವರೂಪ. 'ಸೂಕ್ಷ್ಮ'ವೆಂದರೆ ಎಲ್ಲೆಡೆಯಲ್ಲೂ ಹರಡಿಕೊಂಡಿರುವ ತೇಜಸ್ಸೇ" ಎಂದು ಉತ್ತರವಿತ್ತರು. ಆಗ ಆ ಭಕ್ತರು "ಸುಂದರಮೂರ್ತಿಗಳಿಗೂ ಹಾಗೆಯೇ ಕಾಣಿಸಿತೇನು?" ಎಂದು ಕೇಳಿದರು. ಭಗವಾನರು "ಹೌದು; ಮೊದಲು ಜಲಮಯವಾಗಿಯೂ, ನಂತರ ಜ್ಯೋತಿರ್ಮಯವಾಗಿಯೂ ತೋರಿದ ಬಳಿಕ ಅವರ ಭೌತಿಕ ನೇತ್ರಗಳಿಗೆ ದೇವಸ್ಥಾನವಾಗಿಯೂ ಕಂಡಿತು. ಮಹಾಪುರುಷರು ಪ್ರತಿಯೊಂದನ್ನೂ ಯಾವಾಗಲೂ ಅಂತರ್ದೃಷ್ಟಿಯಿಂದಲೇ ನೋಡುವುದು. ಆದುದರಿಂದಲೇ ಅವರಿಗೆ ಎಲ್ಲವೂ ಜ್ಯೋತಿರ್ಮಯವಾಗಿಯೂ, ಬ್ರಹ್ಮಮಯವಾಗಿಯೂ ಕಾಣುವುದು" ಎಂದರು. ನಾನು "ಭಗವಾನರು ಅರುಣಾಚಲದ ಲಿಂಗೋದ್ಭವವನ್ನು ಕುರಿತಾದ ಒಂದು ಪದ್ಯವನ್ನೂ ಬರೆದಿರಬೇಕಲ್ಲವೇ?" ಎಂದೆ. ಭಗವಾನರು "ಹೌದು. ವಿಕ್ರಮ ಸಂವತ್ಸರದ ಶಿವರಾತ್ರಿಯ ದಿನ ಯಾರೋ ಒಬ್ಬರು ಕೇಳಿದ ಕಾರಣವಾಗಿ ಅದನ್ನು ಬರೆದೆ. ಬಹುಶಃ ಅದನ್ನು ತೆಲುಗಿನಲ್ಲಿಯೂ ಸಹ ಬರೆದೆನೋ ಏನೋ!" ಎಂದರು. ನಾನು,

"ಹೌದು. ಧನುರ್ಮಾಸದಲ್ಲಿ ಆರ್ದ್ರಾ ನಕ್ಷತ್ರದ ದಿನದಂದು ಲಿಂಗೋದ್ಭವ ವಾಯಿತೆಂದೂ, ಆ ಲಿಂಗದಿಂದ ಹೊರಗೆ ಬಂದು ದರ್ಶನವಿತ್ತ ಈಶ್ವರನನ್ನು ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳು ಸೇವಿಸಿದ ದಿನವನ್ನೇ ಮಹಾ ಶಿವರಾತ್ರಿಯೆಂದೂ, ಅದು ಕುಂಭಮಾಸದಲ್ಲೆಂದೂ, ನೀವು ಆ ಪದ್ಯದಲ್ಲಿ ತಿಳಿಸಿದ್ದೀರಿ. ಅದಕ್ಕೆ ಮೂಲ ಯಾವುದು? ಕೃತ್ತಿಕೋತ್ಸವದ ಸಂದರ್ಭ ವೇನು?" ಎಂದೆ.

ಭಗವಾನರು "ಅದೇ? ಬ್ರಹ್ಮನೂ ವಿಷ್ಣುವೂ ತಾನೇ ದೊಡ್ಡವನು, ತಾನೇ ದೊಡ್ಡವನು; ಎಂದು ವಾದವಾಡುತ್ತಿರಲು ಕಾರ್ತಿಕ ಮಾಸದ ಕೃತ್ತಿಕಾನಕ್ಷತ್ರದ ದಿನ ಬ್ರಹ್ಮವಿಷ್ಣುಗಳ ಎದುರು ಆ ಜ್ಯೋತಿಸ್ತಂಭವು ಆವಿರ್ಭವಿಸಿತಂತೆ. ಆದುದರಿಂದ ಅದರ ಗುರುತಾಗಿ ಅದೇ ತಿಂಗಳ ಕೃತ್ತಿಕಾ ನಕ್ಷತ್ರದಂದೇ ದೀಪೋತ್ಸವ ನಡೆಯುತ್ತದೆ. ಬ್ರಹ್ಮವಿಷ್ಣುಗಳಿಬ್ಬರೂ ಈ ಸ್ತಂಭ ದಆದಿ, ಅಂತ್ಯವನ್ನು ಅರಿತುಕೊಳ್ಳಬೇಕೆಂದು ಹೊರಟು ಮೇಲೆ, ಕೆಳಗೆ ಎಷ್ಟು ಹುಡುಕಿದರೂ ಸಾಧ್ಯವಾಗದೆ ಕೊನೆಗೆ ಗರ್ವವರ್ಜಿತರಾಗಿ ಇಬ್ಬರೂ ಒಂದೆಡೆ ಸೇರಿ ಆ ಪರಮಾತ್ಮನನ್ನು ಸ್ತುತಿಸಲು ಜ್ಯೋತಿ-ಸ್ವರೂಪಾಂತರ್ಗತನಾದ ಪರಮೇಶ್ವರನು ಅವರಿಗೆ ಪ್ರತ್ಯಕ್ಷನಾಗಿ ಅನುಗ್ರಹಿಸಿದನೆಂದೂ, ಅವರು 'ನಮ್ಮಿಂದ ನೀನು ಯಾವಾಗಲೂ ಸೇವೆಯನ್ನು ಸ್ವೀಕರಿಸುವವನಾಗಿ ಕೃಪೆತೋರಬೇಕು' ಎಂದು ಪ್ರಾರ್ಥಿಸಲು ಪರಮೇಶ್ವರನು 'ನಾನು ಪರ್ವತಾಕಾರನಾಗಿಯೂ, ಲಿಂಗಾಕಾರನಾಗಿಯೂ ಇರುತ್ತೇನೆ' ಎಂದು ತಿಳಿಸಿ ಲಿಂಗಾರ್ಚನೆಯ ವಿಧಿವಿಧಾನಗಳನ್ನು ಬೋಧಿಸಿ, 'ನೀವೆಲ್ಲರೂ ಲಿಂಗಾಕಾರದಲ್ಲಿರುವ ನನ್ನನ್ನು ಅರ್ಚಿಸಿದರೆ ಕೆಲವು ದಿನಗಳಲ್ಲಿ ಆ ಲಿಂಗದಲ್ಲಿರುವ ನನ್ನ ಅಂಶದಿಂದ ಶಿವಮೂರ್ತಿ ರುದ್ರನೆಂಬ ಹೆಸರಿನಿಂದ ಲಿಂಗದಿಂದ ಹೊರಗೆ ಬಂದು ನಿಮಗೆ ಸಹಾಯಕನಾಗಿ ಇರುತ್ತೇನೆ' ಎಂದು ತಿಳಿಸಿ ಅಂತರ್ಧಾನವಾದನಂತೆ. ಆ ಬಳಿಕ ಧನುರ್ಮಾಸದಲ್ಲಿ ಆರ್ದ್ರಾ ನಕ್ಷತ್ರದ ದಿನ ಜ್ಯೋತಿರ್ಲಿಂಗವಾದ ಅರುಣಗಿರಿಯಿಂದ ಸ್ವಯಂಭೂಲಿಂಗವು ಆವಿರ್ಭವಿಸಿತೆಂದೂ ಅಂದಿನಿಂದ ಈಶ್ವರನ ಆದೇಶಾನುಸಾರವಾಗಿ ಅವರೆಲ್ಲರೂ ಲಿಂಗಾರ್ಚನೆಯ ವಿಧಿಯನ್ನು ಅನುಷ್ಠಾನ ಮಾಡುತ್ತಿರಲು ಕುಂಭಮಾಸದ ತ್ರಯೋದಶೀ ದಿವಸ ಮಧ್ಯರಾತ್ರಿಯಲ್ಲಿ ಆ ಲಿಂಗದಿಂದ ಶಿವನ ಮೂರ್ತಿಯು

ಆವಿರ್ಭವಿಸಿ ಹರಿ ಬ್ರಹ್ಮಾದಿ ದೇವತೆಗಳೆಲ್ಲರಿಂದಲೂ ಸೇವಿಸಲ್ಪಟ್ಟ ಕಾರಣ ವಾಗಿ ಆದೇ ದಿವಸವೇ ಶಿವರಾತ್ರಿಯೆಂದೂ, ಲಿಂಗಪುರಾಣದಲ್ಲೂ ಶಿವಪುರಾಣ ದಲ್ಲೂ ತಿಳಿಸಿದೆ. ಅಂದಿನಿಂದಲೇ ಲಿಂಗಾರ್ಚನೆಯ ವಿಧಾನವು ಮೊದಲಾಯಿ ತಂತೆ. ಈ ಅರುಣಾಚಲ ಲಿಂಗೋದ್ಭವವೇ ಪ್ರಥಮ ಲಿಂಗೋದ್ಭವವೆಂದು ಸ್ಕಾಂದಪುರಾಣದಲ್ಲಿ ನಿರ್ಧಾರವಾಗಿ ಹೇಳಲ್ಪಟ್ಟಿದೆ. ನನ್ನ ಪದ್ಯಕ್ಕೂ ಮೂಲ ಶ್ಲೋಕ ಆ ಲಿಂಗಪುರಾಣದಲ್ಲಿರುವುದೇ" ಎಂದು ವಿವರಿಸಿದರು.

೧೧

21–9–47

## ಮಾಣಿಕ್ಯವಾಚಕರು

ಭಗವಾನರು ಅಡಿ ಅಣ್ಣಾಮಲೆಯಲ್ಲಿನ ಮಾಣಿಕ್ಯವಾಚಕರ ಮಠದ ಸ್ಥಾಪನೆಗೆ ಕಾರಣವನ್ನು ತಿಳಿಸಿದಂದಿನಿಂದಲೂ ನನಗೆ ಅವರ ಜೀವನ ಚರಿತ್ರೆ ಯನ್ನು ಇನ್ನೂ ಹೆಚ್ಚು ವಿಶದವಾಗಿ ಅರಿಯಬೇಕೆಂಬ ಕುತೂಹಲವುಂಟಾ ಯಿತು. ಆದುದರಿಂದ ಇಂದು ಬೆಳಿಗ್ಗೆ ಭಗವಾನರು ಪ್ರಸನ್ನರಾಗಿ ಕುಳಿತಿರು ವುದನ್ನು ಕಂಡು ನಾನು "ಮಾಣಿಕ್ಯವಾಚಕರು 'ತಿರುವಾಚಕಂ' ಸ್ತೋತ್ರ ವನ್ನು ಹಾಡುತ್ತಿರುವಾಗ ಭಗವಂತನಾದ ಚಿದಂಬರದ ನಟರಾಜನೇ ಅದನ್ನು ಬರೆದನಂತೆ; ಇದು ನಿಜವೇನು? ಹಾಗೂ ಅವರ ಜನ್ಮಸ್ಥಳ ಯಾವುದು? ಮತ್ತು ಜೀವನಚರಿತ್ರೆ ಏನು?" ಎಂದು ಪ್ರಶ್ನಿಸಿದೆ. ಭಗವಾನರು "ನಿಜ. ಆ ಕಥೆಯೆಲ್ಲವೂ 'ಹಾಲಾಸ್ಯಮಹಾತ್ಮ್ಯ'ದಲ್ಲಿದೆಯಲ್ಲಾ?" ಎಂದು ಕೇಳಿ ದರು. ನಾನು "ತೆಲುಗು ಭಾಷೆಯ ಈ ಪುಸ್ತಕ ಇಲ್ಲಿಲ್ಲ" ಎಂದೆ. ಭಗವಾನರು "ಹಾಗಾದರೆ ಆ ಕಥೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತೇನೆ, ಕೇಳಿ" ಎಂದು ಹೀಗೆ ತಿಳಿಸಿದರು:

"ಮಾಣಿಕ್ಯವಾಚಕರು ಪಾಂಡ್ಯದೇಶದ ಪಾದವೂರ್ (ಪಾದಪುರಿ) ಎಂಬ ಗ್ರಾಮದಲ್ಲಿ ಜನಿಸಿದರು. ಆದುದರಿಂದ ಅವರನ್ನು ಎಲ್ಲರೂ ಪಾದವೂರರ್ ಎಂದೇ ಕರೆಯುತ್ತಿದ್ದರು. ಅವರು ಬಹಳ ಚಿಕ್ಕವಯಸ್ಸಿನಲ್ಲೇ

ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದರು. ಎಲ್ಲ ಗ್ರಂಥಗಳ ಸಾರವನ್ನು ಗ್ರಹಿಸಿದ ಅವರು ಈಶ್ವರನಲ್ಲಿ ಭಕ್ತಿ ಮತ್ತು ಜೀವಿಗಳಲ್ಲಿ ದಯೆ ಮೊದಲಾದ ಸದ್ಗುಣಗಳಿಂದ ಪ್ರಖ್ಯಾತರಾಗಿದ್ದರು. ಪಾಂಡ್ಯದೇಶದ ರಾಜನು ಅವರ ಕೀರ್ತಿಯನ್ನು ಕೇಳಿ ಅವರನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಆ ನಾಡಿನ ಪ್ರಧಾನಿಯಾಗಿ ನೇಮಿಸಿ 'ತೇನ್ನವನ್ ಪಿರಮರಾಯನ್' (ದಕ್ಷಿಣ ದೇಶದ ಹಿರಿಯ ರಾಯರು) ಎಂಬ ಬಿರುದನ್ನಿತ್ತು ಗೌರವಿಸಿದನು. ಅವರು ಕುಶಲತೆಯಿಂದಲೂ ನ್ಯಾಯದಿಂದಲೂ ಪ್ರಧಾನಿಯ ಕೆಲಸಗಳನ್ನು ನಿರ್ವಹಿಸುತ್ತಿದ್ದರೂ ಕೇವಲ ಐಹಿಕ ಸುಖಗಳಲ್ಲೇ ಮಗ್ನರಾಗಿರದೆ ಭಗವಂತ ನಲ್ಲಿ ಮನಸ್ಸಿಟ್ಟು ಜ್ಞಾನಪ್ರಾಪ್ತಿಗೆ ಸದ್ಗುರುವಿನ ಅನುಗ್ರಹ ಮತ್ತು ಆಶ್ರಯ ಬೇಕೆಂಬುದನ್ನು ಅರಿತು ಅಂತಹ ಸದ್ಗುರುವಿಗಾಗಿ ಅನ್ವೇಷಣೆ ಯನ್ನು ಮಾಡುತ್ತಿದ್ದರು.

"ಹೀಗಿರಲು ಒಮ್ಮೆ ಪಾಂಡ್ಯದೇಶದ ಅರಸನು 'ಕೆಲವು ಉತ್ತಮವಾದ ಕುದುರೆಗಳನ್ನು ಕೊಂಡು ತನ್ನಿ' ಎಂದು ಇವರಿಗೆ ಆಜ್ಞಾಪಿಸಿದನು. ಮಾಣಿಕ್ಯವಾಚಕರೂ ಸಹ ಸದ್ಗುರುವನ್ನು ಹುಡುಕಲು ಇದು ಅನುಕೂಲ ವಾದ ಸಮಯವೆಂದು ಭಾವಿಸಿ ಬೊಕ್ಕಸದಿಂದ ಹೇರಳವಾದ ಹಣವನ್ನು ತೆಗೆದುಕೊಂಡು ಪರಿವಾರಸಮೇತರಾಗಿ ಹೊರಟರು. ಇವರ ಲಕ್ಷ್ಯವು ಸದ್ಗುರುವನ್ನು ಅರಸುವುದರಲ್ಲೇ ಇದ್ದ ಕಾರಣ ದಾರಿಯಲ್ಲಿ ಸಿಕ್ಕಿದ ದೇವಾಲಯ ಗಳನ್ನೂ, ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸುತ್ತ 'ತಿರುಪ್ಪೇರುಂದುರೈ' ಎಂಬ ಊರನ್ನು ತಲುಪಿದರು. ಇವರ ಪಕ್ವವಾದ ಮನಸ್ಸನ್ನು ಅರಿತ ಪರಮೇಶ್ವರನು ಅದೇ ಊರಿನ ದೇವಾಲಯದ ಸಮೀಪದಲ್ಲಿದ್ದ ಮಕ್ಕಳಿಗೆ ಪಾಠವನ್ನು ಹೇಳಿಕೊಡುವ ಶಾಲಾ ಉಪಾಧ್ಯಾಯನ ವೇಷವನ್ನು ಧರಿಸಿ, ಒಂದು ವರ್ಷದಿಂದ ಅಲ್ಲಿಯೇ ವಾಸಿಸುತ್ತ ಸರದಿಯಂತೆ ಪ್ರತಿನಿತ್ಯವೂ ಒಬ್ಬೊಬ್ಬ ವಿದ್ಯಾರ್ಥಿಯ ಮನೆಯಲ್ಲಿ ಊಟವನ್ನು ಮಾಡುತ್ತ ಇವರ ಬರವನ್ನೇ ನಿರೀಕ್ಷಿಸುತ್ತಿದ್ದನು. ಮಾಣಿಕ್ಯವಾಚಕರು ಆ ಸ್ಥಳಕ್ಕೆ ಬಂದು ಸೇರಿದ ದಿನ ಈಶ್ವರನು ಒಬ್ಬ ಸಿದ್ಧಪುರುಷನ ವೇಷ ಧರಿಸಿ ಬಹುಮಂದಿ ಸನ್ಯಾಸಿಗಳಿಂದ ಪರಿವೃತನಾಗಿ ದೇವಾಲಯದ ಪ್ರಾಕಾರದಲ್ಲಿದ್ದ ಆ ಊರಿನ ಸ್ಥಳವೃಕ್ಷವಾದ ಕುರಂದವೃಕ್ಷದಡಿಯಲ್ಲಿ ಕುಳಿತುಕೊಂಡಿದ್ದನು. ಪಾದವೂರರು

ಆಲಯವನ್ನು ಹೊಕ್ಕು ದೇವರ ದರ್ಶನವನ್ನು ಮಾಡಿ ದೇವಸ್ಥಾನಕ್ಕೆ ಪ್ರದಕ್ಷಿಣೆಯಾಗಿ ಬರುತ್ತ ಅಲ್ಲಿ ಕುಳಿತಿದ್ದ ಆ ಸಿದ್ಧಪುರುಷರನ್ನು ಕಂಡ ಕೂಡಲೇ ಅವರ ಮನಸ್ಸು ಆ ಸಿದ್ಧಪುರುಷರಲ್ಲಿಯೇ ನೆಟ್ಟಿತು. ಭಕ್ತಿಯಿಂದ ಅವರ ಕಣ್ಣುಗಳಲ್ಲಿ ನೀರು ತುಂಬಿತು. ಅವರ ಎರಡೂ ಹಸ್ತಗಳು ತಾವಾಗಿಯೇ ತಮ್ಮ ಶಿರದಮೇಲೆ ಹೋಗಿ ಆ ಸಿದ್ಧಪುರುಷರಿಗೆ ತಮ್ಮ ಪ್ರಣಾಮವನ್ನು ಸಲ್ಲಿಸಿದುವು. ಅಪ್ರಯತ್ನವಾಗಿಯೇ ಅವರ ಕಾಲುಗಳು ಆ ಮಹಾಪುರುಷರ ಬಳಿಸಾರಿದುವು. ಅವರು ಬುಡಕಡಿದುರುಳಿದ ಮರದೋಪಾದಿಯಲ್ಲಿ ಆ ಸಿದ್ಧಪುರುಷರ ಅಡಿದಾವರೆಗಳಿಗೆರಗಿ "ಈ ದೀನನನ್ನು ತಮ್ಮ ದಾಸನನ್ನಾಗಿ ಸ್ವೀಕರಿಸುವ ಕೃಪೆತೋರಬೇಕು" ಎಂದು ಬಿನ್ನವಿಸಿಕೊಂಡರು. ಅವರನ್ನು ಅನುಗ್ರಹಿಸಲೆಂದೇ ಅಲ್ಲಿಗೆ ಬಂದಿದ್ದ ಪರಮೇಶ್ವರನು ತಕ್ಷಣ ದೃಷ್ಟಿಮಾತ್ರದಿಂದಲೇ ಅವರಿಗೆ ಜ್ಞಾನೋಪದೇಶವನ್ನು ಕರುಣಿಸಿದನು.

"ಈ ಉಪದೇಶವು ಅವರ ಅಂತರಂಗದಲ್ಲಿ ನಾಟಿ ಅವರಿಗೆ ಅತಿಶಯವಾದ ಆನಂದವಾಯಿತು. ಆನಂದಬಾಷ್ಪಗಳಿಂದಲೂ ಜೋಡಿಸಿದ ಕರಗಳಿಂದಲೂ ಅವರು ಆ ಸದ್ಗುರುವನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಧರಿಸಿದ್ದ ಎಲ್ಲ ವಸ್ತುಗಳನ್ನೂ ಮತ್ತು ವಸ್ತ್ರಗಳನ್ನೂ ಕಳಚಿಹಾಕಿ, ಕೇವಲ ಕೌಪೀನಮಾತ್ರರಾಗಿ ಗುರುಸನ್ನಿಧಿಯಲ್ಲಿ ನಿಂತರು. ಒಡನೆಯೇ ಗುರುವನ್ನು ಸ್ತುತಿಸಬೇಕೆಂಬ ಆಸೆಯಾಯಿತು. ಸದ್ಗುರುವಿನ ಕೃಪಾಕಟಾಕ್ಷಮಾತ್ರದಿಂದಲೇ ಮಾಣಿಕ್ಯದಂತಹ ಸುಂದರವಾದ ಪದಗಳ ಸಮುದಾಯದಿಂದ ತುಂಬಿದ ಭಕ್ತಿಭರಿತವಾದ ಸ್ತೋತ್ರಗಳನ್ನು ರಚಿಸಿ ಸ್ತುತಿಸಿದರು. ಈ ಸ್ತೋತ್ರಗಳಿಂದ ಭಕ್ತಿಪರವಶನಾದ ಈಶ್ವರನು ಬಹಳ ಸಂತೋಷದಿಂದ ಅವರನ್ನು 'ಮಾಣಿಕ್ಯವಾಚಕ!' ಎಂದು ಸಂಬೋಧಿಸಿ 'ಇಲ್ಲಿಯೇ 'ತಿರುಪ್ಪಣಿ' (ತಿರು = ಶ್ರೀ, ಪಣಿ = ಕೆಲಸ, ಅಂದರೆ ದೇವರ ಸೇವೆ) ಯನ್ನು ಮಾಡುತ್ತಿರು' ಎಂದು ಆಜ್ಞಾಪಿಸಿ ಅಂತರ್ಧಾನನಾದನು. ಕೂಡಲೇ ಆ ಸಿದ್ಧಪುರುಷರ ಬಳಿಯಿದ್ದ ಆ ಶಿಷ್ಯಸಮೂಹವೂ ಅದೃಶ್ಯವಾಯಿತು. ಇದನ್ನು ನೋಡಿದ ಮಾಣಿಕ್ಯವಾಚಕರು ತನ್ನನ್ನು ಅನುಗ್ರಹಿಸಲು ಬಂದವರು ಸಾಕ್ಷಾತ್ ಈಶ್ವರನೇ ಎಂದು ತಿಳಿದು ಆ ಈಶ್ವರನು ತನ್ನನ್ನು ಬಿಟ್ಟು ಈಗ ಕಣ್ಮರೆಯಾದನಲ್ಲಾ ಎಂದು ತಾಳಲಾರದ ದುಃಖದಿಂದ ನೆಲದಮೇಲೆ ಬಿದ್ದು ಹೊರಳಾಡುತ್ತಾ,

'ನನ್ನನ್ನು ಅನುಗ್ರಹಿಸಲೆಂದೇ ಬಂದ ಎನ್ನೊಡೆಯನೇ! ಈಗ ನನ್ನನ್ನು ಇಲ್ಲಿಯೇ ಬಿಟ್ಟು ನೀನೆಲ್ಲಿಗೆ ಹೊರಟುಹೋದೆ?' ಎಂಬುದಾಗಿ ಅನೇಕ ಪ್ರಕಾರವಾಗಿ ವಿಲಪಿಸಿದರು. ಆಗ ಆ ಗ್ರಾಮಸ್ಥರಿಗೂ ಸಹ ಅತ್ಯಾಶ್ಚರ್ಯವಾಗಿ ಅಲ್ಲಿಯವರೆಗೆ ಶಾಲಾ ಉಪಾಧ್ಯಾಯರಾಗಿ ನೆಲಸಿದ್ದ ಆ ವ್ಯಕ್ತಿಯನ್ನು ಹುಡುಕಲು ಅವರು ಎಲ್ಲೂ ಕಾಣಿಸಲಿಲ್ಲ. ಆಗ ಅವರು 'ಓಹೋ! ಇವೆಲ್ಲವೂ ಆ ಪರಮಾತ್ಮನ ಲೀಲೆಯೇ ಸರಿ' ಎಂದು ಅರಿತುಕೊಂಡರು. ಮಾಣಿಕ್ಯವಾಚಕರು ಕೆಲವು ಕಾಲದನಂತರ ಸಮಾಧಾನ ತಳೆದು ಈಶ್ವರನ ಆದೇಶವನ್ನು ಪರಿಪಾಲಿಸುವುದು ತಮ್ಮ ಮುಂದಿನ ಮುಖ್ಯ ಕರ್ತವ್ಯವೆಂದು ನಿರ್ಣಯಿಸಿ ತಮ್ಮೊಡನೆ ಬಂದಿದ್ದ ಪರಿವಾರವೆಲ್ಲವನ್ನೂ ಹಿಂದಕ್ಕೆ ಕಳುಹಿಸಿ, ತಂದಿದ್ದ ಹಣವೆಲ್ಲವನ್ನೂ ದೇವಾಲಯದ ಕೆಲಸಗಳಿಗೆ ವಿನಿಯೋಗಿಸುತ್ತ ಅಲ್ಲಿಯೇ ಇದ್ದುಬಿಟ್ಟರು.

"ಈ ಸಮಾಚಾರವೆಲ್ಲವನ್ನೂ ಕೇಳಿದ ರಾಜನು ಕೋಪದಿಂದ ಮಾಣಿಕ್ಯವಾಚಕರಿಗೆ ಕೂಡಲೇ ಮಧುರೆಗೆ ಹಿಂದಿರುಗಬೇಕೆಂದು ಆಜ್ಞಾಪಿಸಿದನು. ಆದರೆ ಅವರು ಕುದುರೆಗಳನ್ನು ಕೊಂಡುಕೊಳ್ಳದೆ ಮಧುರೆಗೆ ಹಿಂದಿರುಗುವುದು ಹೇಗೆ? ಆದರೆ ಕೊಳ್ಳೋಣವೆಂದರೆ ಹಣ ಎಲ್ಲಿದೆ? ಆಗ ಏನು ಮಾಡಲೂ ತೋರದೆ ಭಗವಂತನಲ್ಲೇ ಶರಣಾಗಿ ಮೊರೆಯಿಟ್ಟರು. ಆಗ ಈಶ್ವರನು ಅವರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಅವರ ಕೈಯಲ್ಲಿ ಒಂದು ಅನರ್ಘ್ಯವಾದ ಮಾಣಿಕ್ಯವನ್ನಿತ್ತು 'ಇದನ್ನು ನಿನ್ನ ಪ್ರಭುವಿಗೆ ಕೊಡು; ಕುದುರೆಗಳು ಶ್ರಾವಣಮಾಸದ ಮೂಲಾನಕ್ಷತ್ರದ ದಿನದಂದು ಅಲ್ಲಿಗೆ ಬರುತ್ತವೆ ಎಂದು ತಿಳಿಸು' ಎಂದು ಹೇಳಿದನು. ಮಾಣಿಕ್ಯವಾಚಕರು ಆಶ್ಚರ್ಯಚಕಿತರಾಗಿ ಕಣ್ತೆರೆದು ನೋಡಲು ಈಶ್ವರನು ಎಲ್ಲೂ ಕಾಣಿಸಲಿಲ್ಲ. ಆದರೆ ಆ ಮಾಣಿಕ್ಯವು ಮಾತ್ರ ಅವರ ಕೈಯಲ್ಲಿದೆ! ಕೂಡಲೆ ಅವರು ಬಹಳ ಸಂತೋಷದಿಂದ ವಸ್ತ್ರಗಳನ್ನು ಧರಿಸಿ ಮಧುರೆಗೆ ಪ್ರಯಾಣಮಾಡಿ ಆ ಮಾಣಿಕ್ಯವನ್ನು ಮಹಾರಾಜರಿಗೆ ಸಮರ್ಪಿಸಿ ಕುದುರೆಗಳು ಬರುವ ದಿನವನ್ನು ತಿಳಿಸಿ, ಅವು ಬರುವ ಕಾಲವನ್ನು ನಿರೀಕ್ಷಿಸುತ್ತ ಮಂತ್ರಿಪದವಿಯಲ್ಲಿ ಆಸಕ್ತರಾಗದೆ 'ಶರೀರ ಮಧುರೆಯಲ್ಲಿ, ಮನಸ್ಸು ತಿರುಪ್ಪೆರುಂದುರೈನಲ್ಲಿ' ಎಂಬಂತೆ ಕಾಲಕಳೆಯುತ್ತಿದ್ದರು. ಪಾಂಡ್ಯರಾಜನಾದರೋ ಗೂಢಚಾರರ

ಮೂಲಕ ತಿರುಪ್ಪೇರುಂದುರೈನಲ್ಲಿ ಯಾವ ಕುದುರೆಗಳೂ ಇಲ್ಲವೆಂದೂ, ಬೊಕ್ಕಸದಿಂದ ತೆಗೆದುಕೊಂಡುಹೋದ ಹಣವೆಲ್ಲವನ್ನೂ ಮಾಣಿಕ್ಯವಾಚಕರು ದೇವಸ್ಥಾನದ ಕೆಲಸಗಳಿಗೆ ವಿನಿಯೋಗಿಸಿರುವರೆಂದೂ ಖಚಿತಪಡಿಸಿಕೊಂಡು ಅವರನ್ನು ಬಂಧಿಸಿ ಸೆರೆಮನೆಯಲ್ಲಿಟ್ಟು ಅನೇಕ ಬಗೆಯಾದ ಹಿಂಸೆಗೆ ಗುರಿಪಡಿಸಿದನು.

" ಇಷ್ಟರಲ್ಲಿ ಗೊತ್ತುಪಡಿಸಿದ ದಿನವಾದ ಮೂಲಾನಕ್ಷತ್ರದ ದಿನದಂದು ಈಶ್ವರನು ಕಾಡಿನ ಕೆಲವು ಕ್ರೂರಮೃಗಗಳನ್ನು ಕುದುರೆಗಳಾಗಿ ಮಾರ್ಪಡಿಸಿ ತಾನೇ ಅಶ್ವಪಾಲಕನ ವೇಷಧರಿಸಿ ಅವುಗಳನ್ನು ರಾಜನ ಬಳಿಗೆ ಕೊಂಡೊಯ್ದನು. ಆಗ ರಾಜನು ಅತ್ಯಾಶ್ಚರ್ಯ ಹೊಂದಿ ಆ ಕುದುರೆಗಳೆಲ್ಲವನ್ನೂ ಅಂಗೀಕರಿಸಿ ಅದೇ ಅಶ್ವಪಾಲಕನ ಸಲಹೆಯಂತೆ ಅವುಗಳೆಲ್ಲವನ್ನೂ ಅರಮನೆಯ ಕುದುರೆಗಳೊಂದಿಗೆ ಅರಮನೆಯ ಅಶ್ವಶಾಲೆಯಲ್ಲೇ ಕಟ್ಟಿಹಾಕಿಸಿ, ಆ ವೇಷಧಾರಿಯನ್ನು ಸತ್ಕರಿಸಿ ಕಳುಹಿಸಿಕೊಟ್ಟು, ಮಾಣಿಕ್ಯವಾಚಕರನ್ನು ಸೆರೆಯಿಂದ ಬಿಡುಗಡೆಮಾಡಿ ಅವರ ಕ್ಷಮೆಯನ್ನು ಕೋರಿದನು. ಆದರೆ ಅಂದು ರಾತ್ರಿಯೇ ಆ ಕುದುರೆಗಳೆಲ್ಲವೂ ಕ್ರೂರಮೃಗಗಳಾಗಿ ಮಾರ್ಪಟ್ಟು ಅಲ್ಲಿದ್ದ ಇತರ ಕುದುರೆಗಳೆಲ್ಲವನ್ನೂ ಕೊಂದುತಿಂದು ಗರ್ಜಿಸುತ್ತ ನಗರವಾಸಿಗಳೆಲ್ಲರನ್ನೂ ಹೆದರಿಸಿ ಮತ್ತೆ ಕಾಡಿಗೇ ಓಡಿಹೋದುವು. ಆಗ ರಾಜನು ಅತಿಶಯವಾದ ಕೋಪದಿಂದ ಮಾಣಿಕ್ಯವಾಚಕರು ಒಬ್ಬ ಮಾಯಾವಿಯಿರಬೇಕೆಂದೆಣಿಸಿ ಮತ್ತೆ ಬಂಧಿಸಿ ಅನೇಕ ಬಗೆಯಾದ ಚಿತ್ರಹಿಂಸೆಯನ್ನು ವಿಧಿಸಿದನು. ಕೂಡಲೇ ಈಶ್ವರನ ಇಚ್ಛೆಯಂತೆ ವೈಗೈ ನದಿಯು ಉಕ್ಕಿಹರಿದು ಮಧುರೈ ನಗರವೆಲ್ಲವೂ ಮುಳುಗಲಾರಂಭಿಸಿತು. ಆಗ ರಾಜನು ಹೆದರಿ ಪ್ರಜೆಗಳೆಲ್ಲರನ್ನೂ ಕರೆಸಿ ಎಲ್ಲರೂ ಕೂಡಿ ನದಿಗೆ ಕಟ್ಟೆಯನ್ನು ಕೂಡಲೇ ಕಟ್ಟಬೇಕೆಂದೂ, ಅದಕ್ಕಾಗಿ ಪ್ರತಿಯೊಂದು ಮನೆಯಿಂದಲೂ ಒಬ್ಬ ಆಳಿನಂತೆ ಈ ಕೆಲಸಕ್ಕೆ ಹಾಜರಾಗಬೇಕೆಂದೂ, ಒಬ್ಬೊಬ್ಬರೂ ನಿಯಮಿಸಿದಷ್ಟು ದೂರ ಕಟ್ಟೆಯನ್ನು ಕಟ್ಟತಕ್ಕದ್ದೆಂದೂ, ತಪ್ಪಿದವರಿಗೆ ಶಿಕ್ಷೆಯನ್ನು ವಿಧಿಸಲಾಗುತ್ತದೆಂದೂ ಆಜ್ಞೆಯನ್ನು ಹೊರಡಿಸಿದನು.

" ಆ ಊರಿನಲ್ಲಿ ಪಿಟ್ಟುವಾಣಿ ಅಮ್ಮೈಯಾರ್ ಎಂಬ ಹೆಸರಿನ ಮುದುಕಿಯೊಬ್ಬಳಿದ್ದಳು. ಆಕೆ ಪ್ರತಿನಿತ್ಯವೂ ಕಡುಬು ಮತ್ತು ಇಡ್ಲಿಗಳನ್ನು

ತಯಾರಿಸಿ ಮಾರಿ ಜೀವಿಸುತ್ತಿದ್ದ ಶಿವಭಕ್ತಿಪರಾಯಣೆಯಾದ ಸಾಧುಜೀವಿ. ರಾಜನು ನಿಯಮಿಸಿದ್ದ ಕೆಲಸಕ್ಕೆ ಕಳುಹಿಸಲು ಅವಳ ಮನೆಯಲ್ಲಿ ಬೇರಾರೂ ಇರಲಿಲ್ಲ. ಆದುದರಿಂದ 'ಏನು ಮಾಡಲಿ ಶಿವನೇ!' ಎಂದು ದುಃಖಿಸುತ್ತಿದ್ದಳು. ಇದನ್ನು ಅರಿತ ದಯಾಮಯನಾದ ಈಶ್ವರನು ಒಬ್ಬ ಕೂಲಿ ಯುವನ ವೇಷವನ್ನು ಧರಿಸಿ ಹಾರೆ, ಗುದ್ದಲಿ ಮತ್ತು ಬುಟ್ಟಿಯನ್ನು ಹೆಗಲ ಮೇಲಿಟ್ಟುಕೊಂಡು ಆಕೆಯ ಬಳಿ ಬಂದು 'ಅಮ್ಮಾ! ಇಲ್ಲಿ ಏನಾದರೂ ಕೆಲಸ ವಿದೆಯೇನು?' ಎಂದು ಕೇಳಿದನು. ಆಕೆ, 'ಅಪ್ಪಾ! ಕೆಲಸವೇನೋ ಇದೆ. ಆದರೆ ನಿನಗೆ ಕೂಲಿ ಕೊಡಲು ನನ್ನಲ್ಲಿ ಬಿಡಿಗಾಸೂ ಇಲ್ಲವಲ್ಲಾ!' ಎಂದಾಗ ಅವನು, 'ನನಗೆ ದುಡ್ಡೇನೂ ಬೇಡ. ಆದರೆ ನನಗೆ ತುಂಬಾ ಹಸಿವು. ನೀನು ಮಾಡಿದ ತಿಂಡಿಯಲ್ಲಿ ಚೂರುಗಳೇನಾದರೂ ಉಳಿದಿದ್ದಲ್ಲಿ ಅದನ್ನು ಕೊಟ್ಟರೆ ಸಾಕು. ಅದನ್ನು ತಿಂದು ನಿನ್ನ ಪಾಲಿನ ಕಟ್ಟೆಯನ್ನು ನಾನು ಕಟ್ಟುತ್ತೇನೆ' ಎಂದನು. ಆಕೆ ಹಾಗೆಯೇ ಆಗಲಿ ಎಂದು ತನ್ನಲ್ಲಿದ್ದ ಕಡುಬಿನ ಪಾತ್ರೆಯನ್ನು ನೋಡಲು ಅದರಲ್ಲಿದ್ದ ಎಲ್ಲ ಕಡುಬುಗಳೂ ಚೂರುಗಳಾಗಿಯೇ ಹೋಗಿವೆ! 'ಅಯ್ಯೋ! ಎಲ್ಲವೂ ಚೂರೇ ಆಗಿರುವುದಲ್ಲ!' ಎಂದು ದುಃಖಿಸುತ್ತಲೇ ಆಕೆ ಆ ಪಾತ್ರೆಯನ್ನೇ ಅವನೆಲೆಯ ಮೇಲೆ ಮುಗುಚಿಹಾಕಿ ಮತ್ತೆ ತಿರುಗಿಸಿ ನೋಡಲು ಪಾತ್ರೆಯು ಹಿಂದಿನಂತೆಯೇ ಚೂರುಗಳಿಂದ ತುಂಬಿದೆ! ಆಕೆ ಆಶ್ಚರ್ಯದಿಂದ ಅವೆಲ್ಲವನ್ನೂ ಆ ಕೂಲಿಯವನಿಗೇ ಕೊಡಲು ಅವನು ತಿನ್ನುವಷ್ಟು ತಿಂದು ಉಳಿದುದನ್ನು ಗಂಟುಕಟ್ಟಿಕೊಂಡು ಕಟ್ಟೆಯನ್ನು ಕಟ್ಟಲು ಹೊರಟುಹೋದನು. ಆದರೆ ಅಲ್ಲಿ ಯಾವ ಕೆಲಸವನ್ನೂ ಮಾಡದೆ ಹಾರೆ ಮತ್ತು ಬುಟ್ಟಿಯನ್ನು ತಲೆಕೆಳಗಿಟ್ಟುಕೊಂಡು ಹಾಯಾಗಿ ಮಲಗಿಕೊಂಡು ಹಾಡುತ್ತಲೂ ಮತ್ತು ಇತರರ ಕೆಲಸಕ್ಕೆ ಅಡ್ಡಿಯನ್ನುಂಟುಮಾಡುತ್ತಲೂ ಇದ್ದನು.

"ನದಿಗೆ ಕಟ್ಟೆಯನ್ನು ಕಟ್ಟುವ ಕಾರ್ಯ ಎಲ್ಲಿಯವರೆಗೆ ಬಂದಿದೆಯೋ ನೋಡೋಣವೆಂದು ರಾಜನು ಅಲ್ಲಿಗೆ ಬಂದಾಗ ಆ ಮುದುಕಿಯ ಭಾಗವು ಮಾತ್ರ ಕಟ್ಟಲ್ಪಡದೆ ಹಾಗೆಯೇ ಉಳಿದಿದೆ! ವಿಷಯವೇನೆಂದು ವಿಚಾರಿಸಲು ರಾಜಭಟರು ಆ ಕೂಲಿಕೆಲಸದವನ ವರ್ತನೆಯನ್ನು ವಿವರಿಸಿದರು. ಆಗ ರಾಜನು ಕೋಪದಿಂದ ಕೂಲಿಯ ವೇಷದ ಆ ಪರಮೇಶ್ವರನನ್ನು ಕುರಿತು

‘ನೀನು ಕಟ್ಟೆಯನ್ನು ಕಟ್ಟದೆ ಸುಮ್ಮನೆ ಮಲಗಿದ್ದಲ್ಲದೆ ಸಂಗೀತವನ್ನು ಬೇರೆ ಹಾಡುತ್ತ ಇತರರಿಗೂ ತೊಂದರೆಯನ್ನು ಕೊಡುತ್ತಿದ್ದೆಯೋ?’ ಎಂದು ಹೇಳುತ್ತ ತನ್ನ ಕೈಯಲ್ಲಿದ್ದ ಬೆತ್ತದಿಂದ ಆ ಕೂಲಿಯವನ ಬೆನ್ನಿನ ಮೇಲೆ ಏಟನ್ನು ಕೊಟ್ಟನು. ಹೀಗೆ ಕೊಟ್ಟ ಆ ಏಟು ರಾಜನ ಬೆನ್ನಿನಮೇಲೆಯೂ ಅಲ್ಲದೆ ಅಲ್ಲಿ ನೆರೆದಿದ್ದ ಎಲ್ಲ ಜನರ ಬೆನ್ನಿನಮೇಲೆಯೂ ತಿರುಗಿಬಿತ್ತು. ರಾಜನು ಕೂಡಲೆ ತನ್ನಿಂದ ಏಟು ತಿಂದವನು ಈಶ್ವರನೇ ಇರಬೇಕೆಂದು ಊಹಿಸಿ ಭಯಭ್ರಾಂತನಾಗಿ ದಿಕ್ಕುತೋರದೆ ಸುಮ್ಮನೆ ನಿಂತುಬಿಟ್ಟನು. ಆಗ ಆ ವೇಷಧಾರಿ ಈಶ್ವರನು ಅದೃಶ್ಯನಾದನು. ಅಶರೀರವಾಣಿಯೊಂದು ‘ಎಲೈ ರಾಜನೇ! ಮಾಣಿಕ್ಯವಾಚಕನು ನನ್ನ ಪರಮ ಭಕ್ತ. ಆತನ ಮಹಿಮೆಯು ನಿಮ್ಮೆಲ್ಲರಿಗೂ ಅರಿವಾಗಲೆಂದೇ ಇವೆಲ್ಲವೂ ನಡೆದಿದೆ. ನೀನು ಆತನಲ್ಲೇ ಶರಣಾಗು’ ಎಂದು ತಿಳಿಸಿತು. ಆ ಮಾತು ಕೇಳಿದ ಕೂಡಲೆ ರಾಜನು ಮಾಣಿಕ್ಯವಾಚಕರ ಬಳಿಗೆ ಹೊರಟು, ಮೊದಲು ಶಿವಭಕ್ತೆ ಪಿಟ್ಟುವಾಣಿ ಅಮ್ಮೈಯಾರನ್ನು ನೋಡಲು ಹೋದನು. ರಾಜನು ಆಕೆಯ ಮನೆಯ ಬಳಿಗೆ ಬರುವ ಸಮಯಕ್ಕೆ ಸರಿಯಾಗಿ ಆಕೆಯು ದೇವಲೋಕದಿಂದ ಬಂದಿದ್ದ ವಿಮಾನವನ್ನೇರಿ ಕೈಲಾಸಕ್ಕೆ ಹೊರಟಿದ್ದಳು. ರಾಜನು ಆಶ್ಚರ್ಯದಿಂದ ಆಕೆಗೆ ನಮಿಸಿ ನಂತರ ಮಾಣಿಕ್ಯವಾಚಕರ ಬಳಿಸಾರಿ ಅವರ ಪಾದಗಳಿಗೆ ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡಿದನು. ಮಾಣಿಕ್ಯವಾಚಕರು ಸಾದರದಿಂದ ರಾಜನನ್ನು ಮೇಲಕ್ಕೆತ್ತಿ ಕುಳ್ಳಿರಿಸಿ ಗೌರವಿಸಿ ಕುಶಲಪ್ರಶ್ನೆಯನ್ನು ಮಾಡಲು, ರಾಜನು ‘ನಾನು ಮಾಡಿದ ಅಪರಾಧಗಳೆಲ್ಲವನ್ನು ಮನ್ನಿಸಿ ನನ್ನ ರಾಜ್ಯವನ್ನು ಸ್ವೀಕರಿಸಿ ಪರಿಪಾಲಿಸಬೇಕು’ ಎಂದು ಬಿನ್ನವಿಸಲು ಮಾಣಿಕ್ಯವಾಚಕರು ರಾಜನನ್ನು ಅನುಗ್ರಹದೃಷ್ಟಿಯಿಂದ ನೋಡುತ್ತ, ‘ಅಪ್ಪಾ! ನಾನು ಈಗಾಗಲೇ ಈಶ್ವರನ ದಾಸ್ಯತ್ವವನ್ನು ಮನಸಾರೆ ಅಂಗೀಕರಿಸಿದ್ದೇನೆ. ಆದುದರಿಂದ ನಾನು ರಾಜಕಾರ್ಯದಲ್ಲಿ ಮತ್ತೆ ಪ್ರವೇಶಿಸಲಾರೆ. ಅನ್ಯಥಾ ಭಾವಿಸಬೇಡ. ನೀನು ಹಿಂದಿನಂತೆ ಸುಖವಾಗಿ ಪ್ರಜೆಗಳನ್ನು ಪಾಲಿಸು. ಇನ್ನು ಮುಂದೆ ನಿನಗೆ ಯಾವ ಬಗೆಯ ಕೊರತೆಯೂ ಇರುವುದಿಲ್ಲ’ ಎಂಬುದಾಗಿ ಅನೇಕ ಬಗೆಯಾಗಿ ಸಮಾಧಾನ ಹೇಳಿ ತಾವು ಪರಿವ್ರಾಜಕ ವೇಷದಿಂದ ಹೊರಟು ಅನೇಕ ತೀರ್ಥಕ್ಷೇತ್ರಗಳನ್ನು

ಸಂದರ್ಶಿಸುತ್ತ ಆಯಾ ಕ್ಷೇತ್ರಗಳ ಅಧಿಷ್ಠಾನ ದೇವತೆಗಳನ್ನು ಕುರಿತು ಸ್ತೋತ್ರಗಳನ್ನು ರಚಿಸಿ ಹಾಡಲು ಮೊದಲುಮಾಡಿದರು. ಅವರ ಜೀವನದಲ್ಲಿ ಇಂತಹ ಅದ್ಭುತ ಘಟನೆಗಳೆಷ್ಟೋ ಇವೆ."

ನಾನು "ಅವರು 'ತಿರುವಾಚಕ'ವನ್ನು ಬರೆದದ್ದು ಯಾವಾಗ?" ಎಂದೆ. ಭಗವಾನರು "ಅವರೆಲ್ಲಿ ಬರೆದರು? ಅವರದು ಅತೀತ ಸ್ಥಿತಿ. ಸ್ತೋತ್ರರಚನೆ ಮಾಡಿ ಹಾಡುವುದಷ್ಟೇ ಅವರ ಕೆಲಸ" ಎಂದರು. ನಾನು "ಹಾಗಾದರೆ ಅವುಗಳನ್ನು ಬರೆದದ್ದು ಯಾರು? ಮತ್ತು ಹೇಗೆ ಬರೆದರು?" ಎಂದೆ. ಭಗವಾನರು "ಅದೇ? ಅವರು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಕೊನೆಗೆ ಚಿದಂಬರವನ್ನು ತಲುಪಿ ಅಲ್ಲಿ ಶ್ರೀ ನಟರಾಜಸ್ವಾಮಿಯ ತಾಂಡವ ನೃತ್ಯವನ್ನು ನೋಡಿ ಆನಂದಿಸುತ್ತ ಮನಕರಗುವಂತಹ ಅನೇಕ ಸ್ತೋತ್ರಗಳನ್ನು ರಚಿಸಿ ಹಾಡುತ್ತ ಅಲ್ಲಿಯೇ ನೆಲಸಿದರು.

ಆಗ ಶ್ರೀ ನಟರಾಜಸ್ವಾಮಿಯು ಮಾಣಿಕ್ಯವಾಚಕರ ಮಹಿಮೆಯು ಎಲ್ಲರಿಗೂ ಅರಿವಾಗಬೇಕೆಂದೂ ಅವರಿಂದ ರಚಿತವಾದ ತಿರುವಾಚಕವು ಲೋಕದಲ್ಲಿ ಹರಡಬೇಕೆಂದೂ ಉದ್ದೇಶಿಸಿ ಒಂದು ರಾತ್ರಿ ವಿಪ್ರವೇಷದಲ್ಲಿ ಮಾಣಿಕ್ಯ-ವಾಚಕರ ನಿವಾಸಕ್ಕೆ ಬಂದನು. ಮಾಣಿಕ್ಯವಾಚಕರು ಆ ವಿಪ್ರೋತ್ತಮನನ್ನು ಗೌರವದಿಂದ ಸ್ವಾಗತಿಸಿ "ತಾವು ಬಂದ ಕಾರ್ಯವನ್ನು ಕೃಪೆಮಾಡಿ ತಿಳಿಸಬೇಕು" ಎಂದು ಕೇಳಿದರು. ಆ ವಿಪ್ರನು ಮುಗುಳುನಗುತ್ತ ಬಹಳ ಸಲಿಗೆಯಿಂದ 'ಏನಪ್ಪಾ! ನೀನು ಆಶುಕವಿತಾನೈಪುಣ್ಯದಿಂದ ಅನೇಕ ಸ್ತೋತ್ರಗಳನ್ನು ರಚಿಸಿ ಹಾಡಿದ್ದೀಯಂತೆ. ನಾನು ಆ ಸ್ತೋತ್ರಗಳನ್ನು ನಿನ್ನಿಂದ ಕೇಳಬೇಕೆಂದು ಬಹಳ ಕಾಲದಿಂದಲೂ ಆಶಿಸುತ್ತಿದ್ದೆ. ಆದರೆ ಇದುವರೆಗೂ ಸಾಧ್ಯವಾಗಲಿಲ್ಲ. ಈಗಲೂ ಹಗಲಿನಲ್ಲಿ ಬರಲು ಸಾಧ್ಯವಾಗದಿದ್ದ ಕಾರಣ ಈ ರಾತ್ರಿವೇಳೆಯಲ್ಲಿ ಬಂದಿದ್ದೇನೆ. ನಿನಗೆ ಏನೂ ತೊಂದರೆಯಾಗದಿದ್ದರೆ ಸ್ವಲ್ಪ ಹಾಡುವೆಯೇನು? ನಿನಗೆ ಆ ಸೋತ್ರಗಳೆಲ್ಲವೂ ನೆನಪಿರಬಹುದಲ್ಲವೆ?' ಎಂದು ಕೇಳಿದರು. ಮಾಣಿಕ್ಯವಾಚಕರು 'ನನಗೇನೂ ತೊಂದರೆಯಿಲ್ಲ; ನೆನಪಿರುವುದೆಲ್ಲವನ್ನೂ ಹಾಡುತ್ತೇನೆ, ಕೇಳಿ" ಎಂದು ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸಿ ತನ್ಮಯರಾಗಿ ಹಾಡಲು ಮೊದಲುಮಾಡಿದರು. ಆಗ ಆ ಬ್ರಾಹ್ಮಣನು ಅವುಗಳೆಲ್ಲವನ್ನೂ ತಾಳೆಗರಿಯ ಓಲೆಗಳಲ್ಲಿ ಬರೆಯುತ್ತ

ಕುಳಿತನು. ಮಾಣಿಕ್ಯವಾಚಕರಿಗೆ ಹೊರಗಿನ ಪ್ರಜ್ಞೆಯೇ ಇರಲಿಲ್ಲ. ಅವರು ಆನಂದಪರವಶರಾಗಿ ಹಾಡುತ್ತ ಹಾಡುತ್ತ ಕೊನೆಗೆ ತಮ್ಮ ಸ್ವಸ್ವರೂಪದಲ್ಲಿ ನೆಲಸಿ ಮೌನವಹಿಸಿದ ನಂತರ ಆ ವಿಪ್ರನು ಅಲ್ಲಿಂದ ಕಣ್ಮರೆಯಾದನು.

"ಬೆಳಗಾಯಿತು. ಶ್ರೀ ನಟರಾಜಸ್ವಾಮಿಗೆ ಉಷಃಕಾಲದ ಪೂಜಾದಿಗಳನ್ನು ಮಾಡುವುದಕ್ಕಾಗಿ ಅರ್ಚಕರು ಬಂದು ದೇವರ ಸನ್ನಿಧಿಯ ಬಾಗಿಲುಗಳನ್ನು ತೆರೆಯುತ್ತಲೇ ಸನ್ನಿಧಿಯ ಹೊಸ್ತಿಲಮೇಲೆ ತಾಳೆಯೋಲೆಗಳ ಗ್ರಂಥವೊಂದು ಅವರ ದೃಷ್ಟಿಗೆ ಬಿತ್ತು. ಅದನ್ನು ತೆರೆದು ನೋಡಲು 'ತಿರುವಾಚಕಂ' ಎಂಬ ಹೆಸರಿನ ಆ ಸ್ತೋತ್ರಗಳನ್ನು ಮಾಣಿಕ್ಯವಾಚಕರು ಹೇಳಿದಂತೆ ತಾನು ಬರೆದಿದ್ದು ಎಂದು ತಿಳಿಸಿದ್ದ ಶ್ರೀ ನಟರಾಜಸ್ವಾಮಿಯ ಅಂಕಿತವೂ ಸಹ ಅದರಲ್ಲಿತ್ತು. ಆಗ ಅರ್ಚಕರಿಗೆ ಆಶ್ಚರ್ಯವಾಗಿ ಮಾಣಿಕ್ಯ-ವಾಚಕರನ್ನೇ ಕೇಳಿ ಇದರ ನಿಜಾಂಶವನ್ನು ತಿಳಿದುಕೊಳ್ಳೋಣವೆಂದು ಅವರ ಬಳಿ ಬಂದು ತಿರುವಾಚಕವೆಂಬ ಹೆಸರು, ಶ್ರೀ ನಟರಾಜಸ್ವಾಮಿಯ ಅಂಕಿತ ಇವೆಲ್ಲವನ್ನೂ ತೋರಿಸಿ, 'ಅಯ್ಯಾ! ಇವುಗಳೆಲ್ಲದರ ಅರ್ಥವೇನು ?' ಎಂದು ಕೇಳಿದರು. ಇದನ್ನು ಕೇಳಿದ ಮಾಣಿಕ್ಯವಾಚಕರು ನಡೆದದ್ದನ್ನೆಲ್ಲ ಊಹಿಸಿ, ಯಾವ ಮಾತೂ ಆಡದೆ ಅವರೆಲ್ಲರನ್ನೂ ಶ್ರೀ ನಟರಾಜನ ಸನ್ನಿಧಿಗೆ ಕರೆತಂದು ಸ್ವಾಮಿಗೆ ಎದುರಾಗಿ ನಿಂತು "ಇದೋ ನೋಡಿ! ನನ್ನನ್ನು ಅನುಗ್ರಹಿಸಲು ಬಂದ ಈ ನಟರಾಜಸ್ವಾಮಿಯೇ ಇದರ ನಿಜವಾದ ಅರ್ಥ. ಸಮಸ್ತವೂ ಈತನೇ. ಇದೇ ಪರಮಸತ್ಯ" ಎಂದು ತಿಳಿಸಿ ತಕ್ಷಣವೇ ಜ್ಯೋತಿಸ್ವರೂಪದಿಂದ ಶ್ರೀ ನಟರಾಜಸ್ವಾಮಿಯ ವಿಗ್ರಹವನ್ನು ಹೊಕ್ಕು ಅವನಲ್ಲೇ ಐಕ್ಯರಾಗಿ ಹೋದರು" ಎನ್ನುತ್ತಿರುವಾಗ ಭಗವಾನರ ಸೆರೆಬಿಗಿದುಬಂದು ಮುಂದೇನೂ ಮಾತನಾಡಲಾಗದೆ ಮೌನವನ್ನು ವಹಿಸಿದರು.

25-9-47

## ಆತ್ಮಸ್ವರೂಪದ ಲಕ್ಷಣಗಳು

ನಿನ್ನೆ ಮಧ್ಯಾಹ್ನ ಭಗವಾನರು ಮಲೆಯಾಳಂ ಭಾಷೆಯ ಪುಸ್ತಕವೊಂದನ್ನು ಓದುತ್ತ ಕುಳಿತಿದ್ದರು. ಪಕ್ಕದಲ್ಲಿದ್ದವರು "ಅದು ಯೋಗವಾಸಿಷ್ಠವೇನು ?" ಎಂದಾಗ ಭಗವಾನರು "ಹೌದು" ಎಂದರು. ಆಗ ಅಲ್ಲಿ ಕುಳಿತಿದ್ದ ಪಂಡಿತರೊಬ್ಬರು ಅದರಲ್ಲಿರುವ ಕಥೆಗಳನ್ನು ಕುರಿತು ಶ್ರೀಗಳವರೊಡನೆ ಪ್ರಸ್ತಾಪಿಸುತ್ತ "ಸ್ವಾಮೀ! ಜ್ಞಾನಪ್ರಾಪ್ತಿಗೆ ಅನೇಕ ವಿಧವಾದ ಪ್ರತಿಬಂಧಕಗಳು ಇರುತ್ತವೆ, ಅಲ್ಲವೇ ?" ಎಂದು ಪ್ರಶ್ನಿಸಿದರು.

ಸುಖಾಸನದ ಬೆನ್ನಿಗೆ ಒರಗಿಕೊಂಡಿದ್ದ ಭಗವಾನರು ನೆಟ್ಟಗೆ ಕುಳಿತುಕೊಂಡು, "ಹೌದು. ಅವುಗಳನ್ನೇ ಭೂತ, ಭವಿಷ್ಯತ್ ಮತ್ತು ವರ್ತಮಾನ ಕಾಲದ ಪ್ರತಿಬಂಧಕಗಳು ಎಂದು ಕರೆಯುತ್ತಾರೆ. ಆ ಮೂರರಲ್ಲಿ ಒಂದಾದ ಭೂತಪ್ರತಿಬಂಧಕಕ್ಕೆ ಉಪನಿಷತ್ತಿನಲ್ಲೂ ಮತ್ತು ವಾಸುದೇವ ಮನನದಲ್ಲೂ ಒಂದು ಸುಂದರವಾದ ಕಥೆಯನ್ನು ತಿಳಿಸಿದ್ದಾರೆ. ಅದು ಹೀಗಿದೆ: ದೊಡ್ಡ ಸಂಸಾರದಿಂದ ಕೂಡಿದ ಒಬ್ಬ ಬಡಬ್ರಾಹ್ಮಣನು ತನ್ನ ಜೀವನೋಪಾಯಕ್ಕೋಸ್ಕರ ಒಂದು ಎಮ್ಮೆಯನ್ನು ಸಂಪಾದಿಸಿ ಅದರ ಹಾಲು, ಮೊಸರು, ಬೆಣ್ಣೆ ಮೊದಲಾದುವುಗಳನ್ನು ಮಾರಿ ತನ್ನ ಕುಟುಂಬ ಪೋಷಣೆಯನ್ನು ಮಾಡುತ್ತಿದ್ದನು. ಆತನು ಆ ಎಮ್ಮೆಗೆ ಹಸಿರು ಹುಲ್ಲು, ಹಿಂಡಿ, ಹತ್ತಿಕಾಳು ಮೊದಲಾದುವುಗಳನ್ನು ಹಾಕಿ ಅದನ್ನು ಪೋಷಿಸುವ ಕೆಲಸಗಳಲ್ಲಿ ನಿರತನಾಗಿರುವಾಗಲೇ ಪ್ರಾರಬ್ಧವಶದಿಂದ ಅನುಕ್ರಮವಾಗಿ ಅವನ ಮಕ್ಕಳುಗಳೂ ನಂತರ ಅವನ ಹೆಂಡತಿಯೂ ತೀರಿಕೊಂಡರು. ಆ ತರುವಾಯ ಆತನು ತನ್ನ ಎಮ್ಮೆಯನ್ನೇ ಇನ್ನೂ ಅತಿಶಯವಾದ ಪ್ರೀತಿಯಿಂದ ಅದನ್ನು ತನ್ನ ಸರ್ವಸ್ವವೆಂದೇ ಭಾವಿಸಿ ಸಾಕುತ್ತಿರಲು, ಸ್ವಲ್ಪ ಸಮಯದ ನಂತರ ಆ ಎಮ್ಮೆಯೂ ಸಹ ತೀರಿಹೋಯಿತು. ಆಗ ಆತನು ಒಬ್ಬಂಟಿಗನಾದ ಕಾರಣ ಸಂಸಾರದಲ್ಲಿನ ಅನಿತ್ಯತೆಯನ್ನು ಮನಗಂಡು ಸನ್ಯಾಸಗ್ರಹಣಮಾಡಿ

ಒಬ್ಬ ಗುರುವಿನ ಬಳಿಸಾರಿ ಅವರ ಮಾರ್ಗದರ್ಶನದಲ್ಲಿ ಶ್ರವಣ ಮನನಾದಿ ಸಾಧನೆಯಲ್ಲಿ ತೊಡಗಿದನು.

“ಕೆಲವು ಕಾಲದ ನಂತರ ಗುರುವು ಆತನನ್ನು ಕರೆದು, ‘ನೀನು ಬಹಳ ಕಾಲದಿಂದ ಸಾಧನೆಯನ್ನು ಮಾಡುತ್ತಿದ್ದೀಯೆ; ಅದರಲ್ಲಿ ನೀನು ಸಿದ್ಧಿಯನ್ನು ಪಡೆದೆಯೇನು?’ ಎಂದು ಪ್ರಶ್ನಿಸಿದನು. ಆಗ ಆ ಬ್ರಾಹ್ಮಣನು ಮೇಲಿನ ಕಥೆಯೆಲ್ಲವನ್ನೂ ತಿಳಿಸಿ, ‘ಸ್ವಾಮೀ! ಆ ಕಾಲದಲ್ಲಿ ನನ್ನ ಕುಟುಂಬದ ಪೋಷಣೆಗೆ ಆಧಾರವಾಗಿದ್ದ ಆ ಎಮ್ಮೆಯನ್ನೇ ನಾನು ಬಹುವಾಗಿ ಪ್ರೀತಿಸುತ್ತಿದ್ದೆ. ಅದು ಯಾವಾಗಲೋ ತೀರಿಕೊಂಡಿತು. ಆದರೂ ಧ್ಯಾನದ ಸಮಯದಲ್ಲಿ ಆ ಎಮ್ಮೆಯೇ ಯಾವಾಗಲೂ ನನ್ನ ನೆನಪಿಗೆ ಬರುತ್ತದೆಯಲ್ಲಾ! ಏನು ಮಾಡಲಿ?’ ಎಂದು ಇದ್ದ ಸಂಗತಿಯನ್ನು ಇದ್ದಂತೆ ಗುರುವಿನಲ್ಲಿ ಅರಿಕೆಮಾಡಿಕೊಂಡನು.

“ಆಗ ಗುರುವು ಅದು ಭೂತಪ್ರತಿಬಂಧಕ ಎಂದು ನಿರ್ಣಯಿಸಿ ಒಂದು ಯುಕ್ತಿಯನ್ನು ಅನುಸರಿಸಿ, ‘ಅಪ್ಪಾ! ಬ್ರಹ್ಮನನ್ನು ‘ಅಸ್ತಿ, ಭಾತಿ, ಪ್ರಿಯ’ ಎಂದು ಕರೆಯುತ್ತಾರೆ. ಅಸ್ತಿ ಎಂದರೆ ಇರುವುದು ಎಂದರ್ಥ.* ಭಾತಿ ಎಂದರೆ ಪ್ರಕಾಶಿಸುತ್ತಿರುವುದು; ಪ್ರಿಯ ಎಂದರೆ ಪ್ರಿಯವಾದುದು ಎಂದರ್ಥ. ಆ ಎಮ್ಮೆ ನಿನಗೆ ಅತ್ಯಂತ ಪ್ರಿಯವಾದ ಕಾರಣ ಅದೂ ಸಹ ಬ್ರಹ್ಮಸ್ವರೂಪವೇ. ಆದರೆ ಅದಕ್ಕೆ ನಾಮ (ಹೆಸರು) ಮತ್ತು ರೂಪ (ಆಕಾರ) ಇದೆ. ಈಗ ನೀನು ಮಾಡಬೇಕಾದುದೇನೆಂದರೆ ನಿನ್ನ ನಾಮ ಮತ್ತು ರೂಪಗಳ ಜತೆಗೆ ಅದರ ನಾಮ ಮತ್ತು ರೂಪಗಳನ್ನೂ ತ್ಯಜಿಸಿಬಿಟ್ಟರೆ ಆಗ ಉಳಿಯುವುದು ಕೇವಲ ಬ್ರಹ್ಮಮಾತ್ರವೇ. ಆದುದರಿಂದ ನೀನು ಇನ್ನು ಮುಂದೆ ನಾಮರೂಪಗಳನ್ನು ತ್ಯಜಿಸಿ ನಿನ್ನ ಧ್ಯಾನವನ್ನು ಮುಂದುವರೆಸು’ ಎಂದು ಉಪದೇಶಿಸಿದನು. ಆಗ ಆ ಬ್ರಾಹ್ಮಣನು ಹಾಗೆಯೇ

* ಪ್ರತಿಯೊಂದು ವಸ್ತುವಿನಲ್ಲಿಯೂ ಅಸ್ತಿ, ಭಾತಿ, ಪ್ರಿಯ, ನಾಮ, ರೂಪ ಎಂಬ ಐದು ಇರುತ್ತವೆ; ಇವುಗಳಲ್ಲಿ ಮೊದಲನೆಯ ಮೂರು ಬ್ರಹ್ಮದ ಅಂಶಗಳು, ಕೊನೆಯ ಎರಡು ಮಾಯೆಯ ಅಂಶಗಳು. ಆದುದರಿಂದ ಮಾಯಿಕವಾದ ನಾಮರೂಪಗಳನ್ನು ತೊರೆದು ಉಳಿದ ಅಸ್ತಿ-ಭಾತಿ-ಪ್ರಿಯಗಳನ್ನು ಮನಸ್ಸಿಗೆ ತಂದುಕೊಳ್ಳಬೇಕೆಂದು ಗುರುವಿನ ಉಪದೇಶ. —ಅನುವಾದಕ

ಮಾಡಲು ಆತನಿಗೆ ಜ್ಞಾನಪ್ರಾಪ್ತಿಯಾಯಿತು. ಇದೇ ಭೂತಪ್ರತಿಬಂಧಕ ಎನ್ನುವುದು. ವಾಸ್ತವವಾಗಿ ಇರುವುದು ಎನ್ನುವುದು ಒಂದೇ. ಅದು ಯಾವಾಗಲೂ ಮತ್ತು ಎಲ್ಲೆಡೆಯಲ್ಲೂ ಇರುವುದೇ. 'ಇದೋ! ಇಲ್ಲಿ ಒಂದು ಮೇಜಿದೆ; ಅಲ್ಲಿ ಒಂದು ಹಕ್ಕಿ ಇದೆ; ಅದೋ! ಅಲ್ಲಿ ಒಬ್ಬ ಮನುಷ್ಯ ನಿದ್ದಾನೆ' ಎನ್ನುತ್ತೇವೆ. ಇವುಗಳ ನಾಮರೂಪಗಳು ಬೇರೆಬೇರೆಯೇ ಹೊರತು ಇರುವಿಕೆ ಎಂಬುದು ಮಾತ್ರ ಎಲ್ಲದರಲ್ಲಿಯೂ ಒಂದೇ ಆಗಿದೆ ಯಲ್ಲವೇ? ಅದನ್ನೇ 'ಅಸ್ತಿ' ಎನ್ನುತ್ತಾರೆ. ಈ ವಸ್ತುವೊಂದಿದೆ ಎಂದು ತಿಳಿಯಲು ಅದನ್ನು ಅರಿಯುವವನೊಬ್ಬನಿರಬೇಕು. ಆ ಅರಿವು ಎಂಬ ಜ್ಞಾನದ ಬೆಳಕೇ 'ಭಾತಿ'. 'ಅದನ್ನು ನೋಡಬೇಕು, ಇದು ನನಗೆ ಬೇಕು' ಎಂಬುದಿದ್ದರಲ್ಲವೇ ನೋಡುವುದು, ಕೇಳುವುದು ಎಲ್ಲವೂ. ಇದನ್ನೇ 'ಪ್ರಿಯ' ಎನ್ನುತ್ತಾರೆ. ಈ ಮೂರೂ ಲಕ್ಷಣಗಳು ನಮ್ಮ ನಿಜಸ್ವರೂಪದ ಲಕ್ಷಣಗಳು. ಇವುಗಳನ್ನೇ ಸಚ್ಚಿದಾನಂದ (ಸತ್, ಚಿತ್, ಆನಂದ) ಸ್ವರೂಪ ಎಂದೂ ಹೇಳುತ್ತಾರೆ" ಎಂದು ವಿವರಿಸಿದರು.

"ಪ್ರಿಯವೂ ಸಹ ನಿಜಸ್ವರೂಪದ ಸಹಜಲಕ್ಷಣವಾದರೆ ನಾವು ಯಾವು ದನ್ನು ನೋಡಿದರೂ ಸಹ ಅದು ಪ್ರಿಯವೇ ಆಗಬೇಕಲ್ಲವೇ? ಆದರೆ ಹುಲಿ, ಹಾವು ಮೊದಲಾದ ಪ್ರಾಣಿಗಳು ನಮಗೆ ಪ್ರಿಯವಾಗಿರುವುದಿಲ್ಲವಲ್ಲಾ?" ಎಂದು ಒಬ್ಬ ಭಕ್ತನು ಪ್ರಶ್ನಿಸಿದನು. ಭಗವಾನರು "ನಮಗೆ ಪ್ರಿಯವಾಗದೇ ಇರಬಹುದು. ಆದರೆ ಅದೇ ಜಾತಿಯ ಪ್ರಾಣಿಗಳಿಗೆ ಪ್ರಿಯವೇ ಅಲ್ಲವೇ? ಹುಲಿಯನ್ನು ಕಂಡರೆ ಹುಲಿಗೆ, ಹಾವನ್ನು ಕಂಡರೆ ಹಾವಿಗೆ; ಹಾಗೆಯೇ ಜಾರನಿಗೆ ಜಾರ, ಕಳ್ಳನಿಗೆ ಕಳ್ಳ ಪ್ರಿಯ. ಹೀಗೆಯೇ ಪ್ರತಿಯೊಂದು ವಿಷಯ ದಲ್ಲೂ ಪ್ರಿಯ ಎನ್ನುವುದೆಂಬುದು ಇದ್ದೇ ಇದೆ. ಚಿತ್ರದ ತೆರೆ ಎಂಬುದು ಸದಾಕಾಲ ಇರುವುದೇ. ಅದು 'ಅಸ್ತಿ', ಚಿತ್ರವನ್ನು ತೋರಿಸುವ ಬೆಳಕು 'ಭಾತಿ', ಚಿತ್ರವನ್ನು ನೋಡುವವನು 'ಪ್ರಿಯ', ನಾಮರೂಪಗಳಿಂದ ಕೂಡಿದ ಚಿತ್ರಗಳು ತೆರೆಯಮೇಲೆ ಬರುತ್ತವೆ, ಹೋಗುತ್ತವೆ. ಆದರೆ ಅವು ಗಳನ್ನೇ ನೋಡಿ, ಅವುಗಳೇ ಸತ್ಯವೆಂದು ಭ್ರಮಿಸದೆ ಅವುಗಳನ್ನು ತ್ಯಜಿಸಿದರೆ ಆಗ ಸದ್ವಸ್ತುವಾಗಿ ಸದಾಕಾಲವೂ ಇರುವ ತೆರೆಯು ಮಾತ್ರ ಉಳಿದೇ ಇರು ತ್ತದೆ. ಕತ್ತಲೆಯ ಆವರಣದಲ್ಲಿ ನಾವು ಮಂದಪ್ರಕಾಶದ ಸಹಾಯದಿಂದ

ತೆರೆಯಮೇಲೆ ಅನೇಕ ಬಗೆಯ ಚಿತ್ರಗಳನ್ನು ನೋಡುತ್ತೇವೆ. ಆ ಕತ್ತಲೆಯ ಆವರಣವೇ ಇರದ ಒಂದು ಪ್ರಕಾಶಮಾನವಾದ ಬೆಳಕನ್ನು ಹಾಕಿದರೆ ಆಗ ಅಲ್ಲಿ ಆ ಚಿತ್ರಗಳು ಕಾಣಿಸುತ್ತವೇನು? ಎಲ್ಲವೂ ಒಂದೇ ಪ್ರಕಾಶಮಾನವಾದ ಬೆಳಕಾಗಿಬಿಡುವುದಲ್ಲವೇ? ಹಾಗೆಯೇ ನಮ್ಮ ಮನಸ್ಸು ಎಂಬ ಮಂದಪ್ರಕಾಶದಲ್ಲಿ ನೋಡಿದಾಗ ಮಾತ್ರವೇ ನಾನಾ ರೂಪದ ಈ ವಿಚಿತ್ರ ಪ್ರಪಂಚ ಕಂಡುಬರುತ್ತದೆ. ಆದರೆ ಆತ್ಮಜ್ಞಾನವೆಂಬ ಪ್ರಕಾಶವಾದ ಬೆಳಕನ್ನು ಹಾಕಿ ನೋಡಿದಾಗ ಎಲ್ಲವೂ ಆ ಪ್ರಕಾಶವಾದ ಬೆಳಕೇ ಆಗಿ ಕಂಡುಬರುತ್ತದೆ, ಅಷ್ಟೇ" ಎಂದು ವಿವರಿಸಿದರು.

೧೩

26–9–47

## ಪ್ರತಿಬಂಧಕಗಳು

ನಿನ್ನೆ ಭೂತಕಾಲದ ಪ್ರತಿಬಂಧಕಗಳನ್ನು ಕುರಿತು ಭಗವಾನರು ಹೇಳಿದುದೆಲ್ಲವನ್ನೂ ಕೇಳಿದ ಭಕ್ತರೊಬ್ಬರು ಇಂದು ಭಗವಾನರ ಬಳಿ ಸಾರಿ "ನಿನ್ನೆ ಭೂತಪ್ರತಿಬಂಧಕಗಳನ್ನು ಕುರಿತು ದೃಷ್ಟಾಂತಸಹಿತವಾಗಿ ವಿವರಿಸಿದಿರಿ. ಆದರೆ ವರ್ತಮಾನ ಮತ್ತು ಭವಿಷ್ಯತ್ ಪ್ರತಿಬಂಧಕಗಳನ್ನು ಕುರಿತು ಏನನ್ನೂ ಹೇಳಲೇ ಇಲ್ಲವಲ್ಲಾ?" ಎಂದರು. ಭಗವಾನರು "ಸರಿಹೋಯಿತು! ವಿದ್ಯಾರಣ್ಯರು ಈ ಮೂರು ಪ್ರತಿಬಂಧಕಗಳನ್ನೂ ಮತ್ತು ಅವುಗಳ ನಿವಾರಣೆಯನ್ನೂ ಕುರಿತು ಪಂಚದಶಿಯಲ್ಲಿ* ವಿಸ್ತಾರವಾಗಿ ತಿಳಿಸಿದ್ದಾರೆ!" ಎಂದು ಉತ್ತರವಿತ್ತರು. ಆ ಭಕ್ತರು "ಆದರೆ ನಾನು ಪಂಚದಶಿಯನ್ನು ಓದಿಲ್ಲ" ಎಂದರು. ಆಗ ಭಗವಾನರು, "ಹಾಗೇನು? ಹಾಗಾದರೆ ಹೇಳುತ್ತೇನೆ, ಕೇಳಿ" ಎಂದು ಹೀಗೆ ವಿವರಿಸಿದರು:

"ಭೂತ ಪ್ರತಿಬಂಧಕವನ್ನು ನಿನ್ನೆ ತಿಳಿಸಿಹೇಳಿದೆನಲ್ಲವೇ? ವರ್ತಮಾನ ಪ್ರತಿಬಂಧಕವನ್ನು 'ವಿಷಯಾಸಕ್ತಿ, ಪ್ರಜ್ಞಾಮಾಂದ್ಯ, ಕುತರ್ಕ,

* ಧ್ಯಾನದೀಪ ಪ್ರಕರಣ (41–45)

ರಾಗ್ರಹ' ಎಂಬುದಾಗಿ ನಾಲ್ಕು ಬಗೆಯಾಗಿ ವಿಂಗಡಿಸಿರು ನಾಸಕ್ತಿ ಎಂದರೆ ವಿಷಯ ವಸ್ತುಗಳ ಮೇಲೆ ಗಾಢವಾದ ಆಸಕ್ತಿ ್ರಜ್ಞಾಮಾಂದ್ಯವೆಂದರೆ ಗುರುಗಳು ತಿಳಿಸಿಹೇಳಿದ ವಿಷಯವನ್ನು ್ಥಯಿ ಅಸಮರ್ಥವಾಗಿರುವುದು ; ಕುತರ್ಕವೆಂದರೆ ಗುರುಗಳು ್ಕ ವ್ಯತಿರಿಕ್ತವಾದ ಅರ್ಥವನ್ನೇ ತರ್ಕಿಸುವುದು ; ವಿಪರ್ಯಯ ನರೆ ನಾನು ಬ್ರಾಹ್ಮಣ, ನಾನು ಪಂಡಿತ, ನಾನು ವಿರಕ್ತ ೀಹೇಂದ್ರಿಯಗಳಲ್ಲಿ ಆತ್ಮಬುದ್ಧಿಯನ್ನು ಕಲ್ಪಿಸಿಕೊಳ್ಳುವುದು. ರ್ತಮಾನ ಪ್ರತಿಬಂಧಕಗಳು ಎಂದು ಹೇಳುತ್ತಾರೆ. ಇವುಗಳ ಹೇಗೆಂದರೆ: ಶಮ, ದಮ, ಉಪರತಿ, ತಿತಿಕ್ಷೆ ಮೊದಲಾದ ಭ್ಯಾಸದಿಂದ ವಿಷಯಾಸಕ್ತಿಯನ್ನೂ, ತತ್ತ್ವವನ್ನು ಮತ್ತೆ ಮಾಡುವುದರಿಂದ ಪ್ರಜ್ಞಾಮಾಂದ್ಯವನ್ನೂ, ಆ ಶ್ರವಣಮಾಡಿ ್ತಿ ಮತ್ತೆ ಮನನಮಾಡಿ ಕುತರ್ಕವನ್ನೂ, ನಿದಿಧ್ಯಾಸನದಿಂದ ಸುರಾಗ್ರಹವನ್ನೂ ನಿವೃತ್ತಿಮಾಡಿಕೊಳ್ಳಬಹುದು. ಮೇಲೆ ನಾಗಿ ಸಾಧನೆಯನ್ನು ಮಾಡುತ್ತಮಾಡುತ್ತ ಕಡೆಗೆ ಎಲ್ಲ ಪ್ರತಿ ಾಶವಾದ ಕೂಡಲೆ ಮುಮುಕ್ಷುಗಳಿಗೆ ತಾವೇ ಆತ್ಮಸ್ವರೂಪರು ುದ್ಧಿ ಉಂಟಾಗುತ್ತದೆ. ಇವೇ ವರ್ತಮಾನ ಪ್ರತಿಬಂಧಕಗಳ ತ್ತು ಅವುಗಳ ನಿವೃತ್ತಿಗೆ ಮಾರ್ಗಗಳು.

ಭಾವೀ ಪ್ರತಿಬಂಧಕವೆಂಬುದು, ಪಾಪಕರ್ಮಗಳ ದೆಸೆಯಿಂದ, ಗ ಬರುತ್ತದೆ ಎಂಬುದು ಗೊತ್ತಾಗದೇ ಬರುವಂತಹದು. ಕೊಳ್ಳುವುದು ಹೇಗೆಂದರೆ: ಕೆಲವು ಪಾಪಕರ್ಮಗಳು ಗೆ ಒಂದು ಬಗೆಯಾದ ದಯಾದಾಕ್ಷಿಣ್ಯರೂಪದಲ್ಲಿ ಎದುರಾಗಿ ಆಸಕ್ತಿಯನ್ನು ಹುಟ್ಟಿಸುತ್ತವೆ. ಆ ಬಗೆಯ ಆಸಕ್ತಿಗಳನ್ನು ಧಕಗಳೆಂದು ಅರಿಯಬೇಕು. ಹಾಗೆಂದು ಅರಿಯದೆ ನಾನು ಅಸಂಗನೇ ಆಗಿದ್ದೇನೆ, ಈ ಆಸಕ್ತಿಗಳು ನನ್ನನ್ನು ಏನು ಂದು ಆ ಆಸಕ್ತಿಗಳನ್ನು ನಿಯಂತ್ರಿಸಿಕೊಳ್ಳದಿದ್ದರೆ, ಆ ಪ್ರತಿ ನನಿಗೆ ಹಲವು ಜನ್ಮಗಳನ್ನೇ ಉಂಟುಮಾಡದೆ ಬಿಡದು. ಹೀಗೆ ಧಕವು ಹಲವು ಜನ್ಮಗಳನ್ನು ಉಂಟುಮಾಡುತ್ತವೆ ಎಂಬುದಕ್ಕೆ

*

ವಾಮದೇವರಿಗೆ ಒಂದು ಜನ್ಮವುಂಟಾಯಿತೆಂದೂ ಭರತನಿಗೆ ಮೂರು ಜನ್ಮಗಳುಂಟಾದುವೆಂದೂ ಮತ್ತೆ ಹಲವರಿಗೆ ಅನೇಕ ಜನ್ಮಗಳು ಉಂಟಾದುವೆಂದೂ ಶ್ರುತಿ ಸ್ಮೃತಿ ಪುರಾಣಗಳಲ್ಲಿ ಹೇಳಿದೆ. ಆದುದರಿಂದ ಮುಮುಕ್ಷುವಾದವನು ಈ ಮೇಲೆ ತಿಳಿಸಿದ ಪ್ರತಿಬಂಧಕತ್ರಯಗಳನ್ನು ಕೂಲಂಕುಷವಾಗಿ ವಿಚಾರಿಸಿ ಅವುಗಳು ತನಗೆ ಉಂಟಾಗದಂತೆ ಎಚ್ಚರವಹಿಸಬೇಕು. ಹಾಗೆ ಮಾಡದಿದ್ದರೆ ಅವನಿಗೆ ನಿಶ್ಚಯವಾಗಿ ಹಲವಾರು ಜನ್ಮಗಳು ಉಂಟಾಗುವುದರಲ್ಲಿ ಏನೂ ಸಂದೇಹವಿಲ್ಲ. ಯಾವಾತನಿಗೆ ಈ ಪ್ರತಿಬಂಧಕತ್ರಯಗಳೂ ನಾಶವಾಗಿ ಹೋಗಿರುತ್ತವೋ ಆತನಿಗೆ ಅದೇ ಜನ್ಮದಲ್ಲೇ ಮುಕ್ತಿಯು ದೊರಕುತ್ತದೆಂದು ವಿದ್ಯಾರಣ್ಯಮುನಿಗಳು ತಿಳಿಸಿದ್ದಾರೆ. ವಾಸುದೇವಮನನದಲ್ಲೂ ಸಹ ಇದೇ ವಿಷಯವಾಗಿ ತಿಳಿಸಿದ್ದಾರೆ. ಅದರಲ್ಲಿ ಈ ಪ್ರತಿಬಂಧಕಗಳಿಗೆ ಉದಾಹರಣೆಯಾಗಿ ಎಷ್ಟೋ ಕಥೆಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಭರ್ಜುವ ಕಥೆ, ಯಜ್ಞಪಶುವಿನ ಕಥೆ ಮೊದಲಾದುವು ಬಹಳ ಸ್ವಾರಸ್ಯವಾಗಿವೆ. ಆಸುರೀ ವಾಸನೆಗಳ ಕುರಿತಾದ ಕಥೆಯೂ ಸಹ ಬಹಳ ಸೊಗಸಾಗಿದೆ. ಪ್ರತಿಯೊಂದು ವಿಷಯಕ್ಕೂ ದೃಷ್ಟಾಂತಪೂರ್ವಕವಾಗಿ ಒಂದೊಂದು ಕಥೆಯನ್ನು ಅದರಲ್ಲಿ ತಿಳಿಸಿದ್ದಾರೆ. ನೀವು ಅದನ್ನು ಓದಿಲ್ಲವೇನು ? " ಎಂದರು.

ಆಗ ಆ ಭಕ್ತರು "ಚಿಕ್ಕಂದಿನಲ್ಲಿ ಎಲ್ಲೋ ಓದಿದ ನೆನಪು. ಆದರೆ ಅದರಲ್ಲಿ ಇಷ್ಟೊಂದು ಗಹನವಾದ ವಿಷಯ ಇರುವುದು ಈಗ ಭಗವಾನರು ತಿಳಿಸಿದನಂತರವೇ ಗೊತ್ತಾಯಿತು. ಇದಕ್ಕೆ ಮೊದಲು ಗೊತ್ತಿರಲಿಲ್ಲ. ಈಗ ಭಗವಾನರ ಅಣತಿಯಂತೆ ಅದನ್ನು ಮತ್ತೆ ಓದುತ್ತೇನೆ" ಎಂದು ತಿಳಿಸಿ ವಿನಯಪೂರ್ವಕವಾಗಿ ಭಗವಾನರಿಂದ ಬೀಳ್ಕೊಂಡರು.

೧೪

28–9–47

## ಬೃಂದಾವನ

ಇಂದು ಬೆಳಿಗ್ಗೆ ಉತ್ತರಭಾರತದೇಶದವರೊಬ್ಬರು ಒಂದು ಚೀಟಿಯನ್ನು ಭಗವಾನರ ಕೈಗಿತ್ತರು. ಅದರಲ್ಲಿನ ಸಾರಾಂಶ : "ಬೃಂದಾವನದಲ್ಲಿ

ಶ್ರೀಕೃಷ್ಣನ ನಿಜಸ್ವರೂಪವನ್ನು ದರ್ಶಿಸಿದರೆ ನನ್ನ ಕಷ್ಟಗಳೆಲ್ಲವನ್ನೂ ಪರಿಹರಿಸಿಕೊಳ್ಳುವ ಶಕ್ತಿಯು ಉಂಟಾಗುತ್ತದೇನು? ಅವನ ದರ್ಶನವನ್ನು ಪಡೆದು ನನ್ನ ಭಾರವೆಲ್ಲವನ್ನೂ ಅವನಿಗೇ ವಹಿಸಬೇಕೆಂಬ ಇಚ್ಛೆಯಾಗಿದೆ." ಭಗವಾನರು ಆ ಚೀಟಿಯನ್ನೋದಿ "ಅದಕ್ಕೇನಂತೆ! ಹಾಗೆಯೇ ಮಾಡ ಬಹುದು. ಅವರನ್ನು ದರ್ಶನಮಾಡಿದ ನಂತರ ನಮ್ಮ ಎಲ್ಲ ಭಾರವೂ ಅವರ ಮೇಲೆಯೇ ಇರುತ್ತದೆ. ಈಗ ಆ ಚಿಂತೆ ನಿಮಗೇಕೆ? ಈಗಲೂ ಸಹ ನಿಮ್ಮ ಎಲ್ಲ ಭಾರವನ್ನೂ ಅವರಿಗೇ ವಹಿಸಿಬಿಟ್ಟರೆ ಅವರೇ ಎಲ್ಲವನ್ನೂ ನೋಡಿ ಕೊಳ್ಳುವುದಿಲ್ಲವೇನು?" ಎಂದರು. ಅವರು "ನಾನು ಈಗ ಶ್ರೀಕೃಷ್ಣನ ನಿಜಸ್ವರೂಪವನ್ನು ಕಾಣಬೇಕಾದರೆ ಬೃಂದಾವನಕ್ಕೆ ಹೋಗಿ ಅವರನ್ನು ಧ್ಯಾನಿಸಬೇಕೋ, ಅಥವಾ ಎಲ್ಲಿ ಬೇಕಾದರೂ ಧ್ಯಾನಿಸಬಹುದೋ?" ಎಂದು ಪ್ರಶ್ನಿಸಿದರು.

ಭಗವಾನರು "ತಾನು ಯಾರು ಎಂಬುದನ್ನು ವಿಚಾರಮಾಡಿ ತನ್ನನ್ನು ತಾನು ಅರಿತುಕೊಂಡನಂತರ ತಾನು ಎಲ್ಲಿದ್ದರೆ ಅಲ್ಲೇ ಬೃಂದಾವನವೇ ಹೊರತು ಬೃಂದಾವನವೆಂಬುದು ಬೇರೆಲ್ಲಿಯೋ ಇದೆ ಎಂದು ಎಲ್ಲೆಡೆಯಲ್ಲಿಯೂ ಅಲೆಯುವ ಕಾರಣವಿಲ್ಲ. ಅಲ್ಲಿಗೇ ಹೋಗಬೇಕೆಂಬ ತೀವ್ರವಾದ ಅಭಿಲಾಷೆ ಇರುವವರು ಬೇಕಾದರೆ ಹೋಗಬಹುದು. ಆದರೆ ಹೋಗದಿದ್ದರೆ ಏನೂ ಉಪಯೋಗವಿಲ್ಲ ಎಂಬ ನಿಯಮವೇನಿಲ್ಲ.

ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ |
ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ||
(ಗೀ. ಅ 10-ಶ್ಲೋ. 20)

ಎಂಬ ಗೀತೆಯ ನುಡಿಯಂತೆ 'ತಾನು' ಇರುವ ಸ್ಥಳವೇ ಬೃಂದಾವನ. ತಾನು ಯಾರು ಮತ್ತು ತನ್ನ ಸ್ವರೂಪವೇನು ಎಂದು ವಿಚಾರಿಸಿ ತಿಳಿದುಕೊಂಡಾಗ ಆತನೇ ಶ್ರೀಕೃಷ್ಣನಾಗುತ್ತಾನೆ. ಸಮಸ್ತ ವಿಷಯವಾಸನೆಗಳೂ ತನ್ನಲ್ಲಿ ಲಯವಾಗುವುದನ್ನೇ, ತನ್ನನ್ನು ಅರ್ಪಿಸಿಕೊಳ್ಳುವುದು ಎನ್ನುವುದರ ನಿಜ ವಾದ ಅರ್ಥ. ನಂತರ ನಮ್ಮ ಎಲ್ಲ ಭಾರವೂ ಆತನ ಮೇಲೇ!" ಎಂದರು.

ಆಗ ಅಲ್ಲಿ ಕುಳಿತಿದ್ದ ಶಾಸ್ತ್ರಿಗಳೊಬ್ಬರು "ಸ್ವಾಮೀ! ಗೀತೆಯಲ್ಲಿ 'ವಿವಿಕ್ತ ದೇಶ ಸೇವಿತ್ವಂ ಅರತಿರ್ಜನ ಸಂಸದಿ' ಎಂದು ಹೇಳಿದ್ದಾರೆ. 'ವಿವಿಕ್ತ ದೇಶ' ಎಂದರೇನು?" ಎಂದು ಕೇಳಿದರು. ಭಗವಾನರು "ಪರಮಾತ್ಮನೊಬ್ಬನನ್ನು ಬಿಟ್ಟು ಬೇರೇನೂ ಇಲ್ಲದ ಪ್ರದೇಶವೇ 'ವಿವಿಕ್ತ ದೇಶ', 'ಅರತಿರ್ಜನ ಸಂಸದಿ' ಎಂದರೆ ವಿಷಯಾದಿಗಳೊಡನೆ ಸಂಪರ್ಕ ಹೊಂದದಿರುವುದೇ. ವಿಷಯಾದಿಗಳೇ ಜನಸಮೂಹ. ಅವುಗಳಿಲ್ಲದ ಸ್ಥಳವೇ ವಿವಿಕ್ತದೇಶ" ಎಂದರು. ಆಗ ಆ ಶಾಸ್ತ್ರಿಗಳು "ಭಗವಾನರು ಈಗ ಅಪ್ಪಣೆ ಕೊಡಿಸುತ್ತಿರುವ ಆ ವಿವಿಕ್ತದೇಶ ಅಪರೋಕ್ಷ ಎಂದಹಾಗಾಯಿತು. ಆದರೆ ಗುರುಗಳ ಉಪದೇಶವನ್ನು ಅನುಸರಿಸಿ ವಿವಿಕ್ತದೇಶ ಎಂದರೆ ಹೆಚ್ಚಿನ ಜನಗಳು ಇಲ್ಲದ ಸ್ಥಳದಲ್ಲಿ ವಾಸಿಸುತ್ತ ಸಾಧನೆಯನ್ನು ಕೈಗೊಂಡರಲ್ಲವೇ ತಾವು ಹೇಳಿದ ಅಪರೋಕ್ಷಸ್ಥಿತಿಯನ್ನು ಹೊಂದುವುದು?" ಎಂದರು. ಭಗವಾನರು "ಹೌದು. ವಾಸುದೇವ ಮನನ ಮೊದಲಾದ ಗ್ರಂಥಗಳಲ್ಲಿ ಗುರುಸಾನ್ನಿಧ್ಯ ದಲ್ಲಿದ್ದು ಶ್ರವಣ ಮನನಾದಿಗಳಿಂದ ಪರೋಕ್ಷಜ್ಞಾನವನ್ನು ಸಂಪಾದಿಸಿ ಬಳಿಕ ಸಾಧನೆಯಿಂದ ಪರಿಪಕ್ವಚಿತ್ತರಾಗಿ ಅಪರೋಕ್ಷ ಜ್ಞಾನವನ್ನು ಹೊಂದಬೇಕು ಎಂದು ಹೇಳಿದ್ದಾರೆ. 'ವಿಚಾರ ಸಾಗರ'ದಲ್ಲಿ ಅಪರೋಕ್ಷ ಎಂಬುದು ಯಾವಾಗಲೂ ಇರುವುದೇ. ಅದಕ್ಕೆ ಪ್ರತಿಬಂಧಕಗಳೇ ಪರೋಕ್ಷ. ಆ ಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಳ್ಳಬೇಕೇ ಹೊರತು ಅಪರೋಕ್ಷವನ್ನು ಹೊಂದಲು ಬೇರೆ ಯಾವ ಪ್ರಯತ್ನವೂ ಬೇಡ ಎಂದಿದ್ದಾರೆ. ಹೇಗೆ ಹೇಳಿದರೂ ಒಂದೇ. ಸದ್ವಸ್ತುವಿನ ಜ್ಞಾನಕ್ಕೋಸ್ಕರವಾಗಿಯಾದರೂ ಶ್ರವಣಾದಿಗಳು ಅವಶ್ಯವೇ. ಪ್ರತಿಬಂಧಕಗಳ ನಿವಾರಣೆಗಾದರೂ ಶ್ರವಣಾದಿಗಳು ಅವಶ್ಯವೇ. ಮೂರು ವಿಧವಾದ ಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಂಡವರು ನಿವಾತ ದೀಪದಂತೆ (ಗಾಳಿಯು ಬೀಸದ ಸ್ಥಳದಲ್ಲಿ ಸ್ಥಿರವಾಗಿ ಉರಿಯುತ್ತಿರುವ ದೀಪದಂತೆ) ಯೂ ತರಂಗಗಳಿಲ್ಲದ ನೀರಿನಂತೆಯೂ ಇರುತ್ತಾರೆಂದು ಉಪಮಾನಗಳನ್ನು ಕೊಡುತ್ತಾರೆ. ಎರಡೂ ನಿಜವೇ. ತನ್ನಲ್ಲಿ ತಾನು ಇದ್ದಂತೆ ಕಾಣುವಾಗ ನಿವಾತ ದೀಪದಂತೆಯೂ, ತಾನೇ ಎಲ್ಲೆಡೆಯಲ್ಲೂ ಇರುವಂತೆ ಕಾಣುವಾಗ ತರಂಗವಿಲ್ಲದ ನೀರಿನಂತೆಯೂ ಇರುತ್ತಾನೆ" ಎಂದು ವಿವರಿಸಿದರು.

18–10–47

## ಹೆಚ್ಚು ಬೆಲೆಯ ತರಕಾರಿಗಳು

ಇತ್ತೀಚೆಗೆ ಆಹಾರದಲ್ಲಿ ಏನೋ ಹೆಚ್ಚುಕಡಿಮೆಯಾದ ಕಾರಣ ಭಗವಾನರ ಶರೀರ ಸ್ವಲ್ಪ ಕೃಶವಾಗುತ್ತ ಬಂತು. ಅದನ್ನು ಗಮನಿಸಿದ ಕಮಲಾರಾಣಿಯೆಂಬ ಶ್ರೀಮಂತ ಭಕ್ತೆಯೊಬ್ಬಳು ಹೆಚ್ಚು ಬೆಲೆಯ ತರಕಾರಿಗಳು ಮತ್ತು ಹಸಿದ್ರಾಕ್ಷಿಯೇ ಮೊದಲಾದ ಹಣ್ಣುಗಳಿಂದ ತಯಾರಿಸಿದ ದ್ರವ ಪದಾರ್ಥವೊಂದನ್ನು ಇಂದು ಬೆಳಿಗ್ಗೆ ಹತ್ತೂವರೆ ಗಂಟೆಗೆ ಭಕ್ತರೊಬ್ಬರ ಮೂಲಕ ಭಗವಾನರಿಗೆ ನೀಡಬೇಕೆಂದು ಕಳುಹಿಸಿಕೊಟ್ಟರು. ಊಟದ ಸಮಯಕ್ಕೆ ಈಕೆ ಇದನ್ನು ಕಳುಹಿಸಿದ್ದಾಳೆ, ಹೋಗಲಿ ಎಂದು ಅದನ್ನು ಅಂದು ಭಗವಾನರು ಸ್ವೀಕರಿಸಿದರು. ಆಕೆ ಮರುದಿನವೂ ಹಾಗೆಯೇ ಮಾಡಿ, ಅದೇ ವೇಳೆಗೆ ಮತ್ತೆ ಭಗವಾನರಿಗೆ ಕಳುಹಿಸಿದಳು. ಭಗವಾನರು ಅದನ್ನು ನೋಡಿ ಸೇವಕರೊಡನೆ "ನಿತ್ಯವೂ ಇದು ಏಕೆ? ಇನ್ನು ಮುಂದೆ ಹೀಗೆ ಕಳುಹಿಸಕೂಡದೆಂದು ಆಕೆಗೆ ತಿಳಿಸಿ" ಎಂದರು. ಆದರೆ ಅದರ ಮರುದಿನವೂ ಆಕೆ ಇದೇ ರೀತಿ ಮತ್ತೆ ಕಳುಹಿಸಿದಾಗ ಭಗವಾನರು "ಅದೋ! ಇಂದು ಮತ್ತೆ ಬಂದಿದೆ. ಕಳುಹಿಸಬೇಡವೆಂದರೂ ಇವರು ಕೇಳುತ್ತಾರೇನು? ಮೊದಲೇ ಬೇಡ ಎಂದು ನಾವು ಹೇಳಬೇಕಾಗಿತ್ತು. ತೆಗೆದುಕೊಂಡ ತಪ್ಪು ನಮ್ಮದೇ" ಎಂದರು.

ಆಗ ಭಕ್ತರೊಬ್ಬರು "ಈಚೆಗೆ ಭಗವಾನರ ದೇಹ ಸೊರಗುತ್ತಿದೆಯಲ್ಲವೇ? ದ್ರಾಕ್ಷಿಯೇ ಮೊದಲಾದ ಪದಾರ್ಥಗಳಿಂದ ಕೂಡಿದ ಈ ದ್ರವ ಪದಾರ್ಥವು ಭಗವಾನರ ಆರೋಗ್ಯಕ್ಕೆ ಒಳ್ಳೆಯದೆಂದು ಬಹುಶಃ ಆಕೆ ಹೀಗೆ ಕಳುಹಿಸುತ್ತಿರಬಹುದು" ಎಂದರು. ಭಗವಾನರು "ಓಹೋ! ಹಾಗೇನು? ನೀವು ಆಕೆಯ ಪರವಾಗಿ ವಕಾಲತ್ತು ವಹಿಸಲು ಒಪ್ಪಿಕೊಂಡಿದ್ದೀರೋ?" ಎಂದರು. ಅವರು "ಭಗವಾನ್, ಹಾಗಲ್ಲ. ಇಂತಹ ಪದಾರ್ಥಗಳು ಆರೋಗ್ಯಕರವಾಗಿರುತ್ತವೆ ಎಂದು ಹೇಳಿದೆ, ಅಷ್ಟೆ" ಎಂದರು. ಭಗವಾನರು "ಇರಬಹುದು. ಆದರೆ ಅವುಗಳೆಲ್ಲ ಶ್ರೀಮಂತರಿಗೆ ಮಾತ್ರವೇ ಹೊರತು

ನಮಗಲ್ಲ" ಎಂದರು. ಆ ಭಕ್ತರು "ಆದರೆ ಆಕೆ ಪ್ರತಿದಿನವೂ ಹೀಗೆಯೇ ಮಾಡಿ ಕಳುಹಿಸುತ್ತೇನೆಂದು ಹೇಳುತ್ತಿದ್ದಾರೆ" ಎಂದರು. ಭಗವಾನರು "ಸರಿಹೋಯಿತು. ಹಾಗಾದರೆ ಇಲ್ಲಿ ಊಟಮಾಡುವವರೆಲ್ಲರಿಗೂ ಆಕೆಯು ಹಾಗೆಯೇ ಕಳುಹಿಸಿಕೊಡುತ್ತಾರೇನು ಎಂಬುದನ್ನು ಕೇಳಿ ತಿಳಿದುಕೊಳ್ಳಿ" ಎಂದರು. ಆಗ ಅವರು "ಇದು ಎಲ್ಲರಿಗೂ ಏಕೆ ಬೇಕು?" ಎಂದಾಗ ಭಗವಾನರು "ಹಾಗಾದರೆ ನನಗೆ ಮಾತ್ರವೇ ಏಕೆ?" ಎಂದು ಕೇಳಿದರು. ಆ ಭಕ್ತರು "ಭಗವಾನರಿಗೆ ಮಾತ್ರ ಮಾಡಿಕೊಡಲು ಸಾಧ್ಯವೇ ಹೊರತು ಅಷ್ಟೊಂದು ದುಬಾರಿಯಾದ ಪದಾರ್ಥವನ್ನು ಎಲ್ಲರಿಗೂ ಮಾಡಿಕೊಡಲು ಸಾಧ್ಯವಾಗುವುದೇ?" ಎಂದರು. ಭಗವಾನರು "ಓಹೋ! ಹಾಗೋ ಸಮಾಚಾರ! ಎಲ್ಲರೂ ಹೇಳುತ್ತಿರುವುದು ಇದೇ ಮಾತನ್ನೇ. ಭಗವಾನರಿಗೆ ಮಾತ್ರವೇ ಮಾಡಿಕೊಡುತ್ತೇವೆ ಎನ್ನುತ್ತಾರೆ. ಭಗವಾನರಿಗೆ ಒಳ್ಳೆಯ ದಾಗಿರುವ ಪದಾರ್ಥ ಎಲ್ಲರಿಗೂ ಒಳ್ಳೆಯದಾಗಿರುವುದಿಲ್ಲ ಎಂದು ಹೇಳಿ ದಂತಿದೆ. ಇದಕ್ಕೆ ತಗಲುವ ವೆಚ್ಚದಲ್ಲಿ ಅಕ್ಕಿಯ ನುಚ್ಚನ್ನು ಕೊಂಡು ಅಂಬಲಿ ಮಾಡಿಕೊಟ್ಟರೆ ನೂರಾರು ಮಂದಿ ಕುಡಿಯಬಹುದಲ್ಲವೇ? ನಮಗೊಬ್ಬರಿಗೋಸ್ಕರವೇ ಏಕಿಷ್ಟು ಖರ್ಚು?" ಎಂದು ಕೇಳಿದರು.

ಆ ಭಕ್ತರು "ಭಗವಾನರ ಶರೀರಾರೋಗ್ಯವು ಚೆನ್ನಾಗಿರಬೇಕೆಂದು ನಾವೆಲ್ಲರೂ ಬಹಳ ಕಾತರರಾಗಿದ್ದೇವೆ" ಎಂದರು. ಭಗವಾನರು "ಅದೇನೋ ಸರಿ. ದ್ರಾಕ್ಷಿಯೇ ಮೊದಲಾದ ಹಣ್ಣುಗಳು ಮತ್ತು ಹೆಚ್ಚು ಬೆಲೆಯ ತರಕಾರಿಗಳು ಮೊದಲಾದವುಗಳನ್ನು ಹಾಕಿ ಮಾಡಿದ ಇಂತಹ ದ್ರವಪದಾರ್ಥ ದಿಂದಲೇ ಒಬ್ಬರ ಆರೋಗ್ಯ ಉತ್ತಮವಾಗುತ್ತದೆ ಎಂದು ನಿಮ್ಮ ಅಭಿಪ್ರಾಯ ವೇನು? ಹಾಗಾದರೆ ಶ್ರೀಮಂತರು ಇದನ್ನು ಪ್ರತಿನಿತ್ಯವೂ ತೆಗೆದುಕೊಳ್ಳು ತ್ತಲೇ ಇರುತ್ತಾರಲ್ಲವೇ? ಹಾಗೆಂದಮೇಲೆ ಅವರೆಲ್ಲರೂ ಆರೋಗ್ಯವಾಗೇ ಇರಬೇಕು. ಆದರೆ ಹಾಗಿರದೆ ಅವರಿಗೇ ಹೆಚ್ಚು ಅನಾರೋಗ್ಯವಿರುತ್ತದೆ ಯಲ್ಲಾ, ಅದೇಕೆ? ಅವರುಗಳಿಗಿಂತಲೂ ಉಪ್ಪಿನಕಾಯಿಯ ಚೂರನ್ನು ನಂಜಿಕೊಂಡು ಗಂಜಿಯೂಟ ಮಾಡುವ ಬಡವನೇ ಹೆಚ್ಚು ಆರೋಗ್ಯವಂತ ನಾಗಿರುತ್ತಾನೆ. ಅಂತಹ ಗಂಜಿ ನೀರನ್ನು ಕುಡಿದರೆ ಆಗುವ ಸುಖ ಬೇರಾವುದ ರಿಂದಲೂ ಆಗುವುದಿಲ್ಲ. ಹಿಂದೆ ನಾವು ಇಲ್ಲಿ ಅಡಿಗೆ ಮಾಡುತ್ತಿದ್ದ ಕಾಲದಲ್ಲಿ

ಬೇಸಗೆಯ ಕಾಲ ಬಂದಿತು ಎಂದರೆ ಒಂದು ದೊಡ್ಡ ಮಡಕೆಯನ್ನು ತಂದು ಎಲ್ಲರ ಊಟವಾದ ನಂತರ ಮಿಕ್ಕ ಅನ್ನವನ್ನು ಆ ಮಡಕೆಯಲ್ಲಿ ಹಾಕಿ, ತುಂಬಾ ನೀರು ಸುರಿದು, ಸ್ವಲ್ಪ ಮಜ್ಜಿಗೆ, ಸ್ವಲ್ಪ ಗಂಜಿ ಬೆರೆಸಿ, ಹಸಿಶುಂಠಿ, ಕರಿಬೇವು ಎಲ್ಲವನ್ನೂ ಹಾಕಿ, ಹಾಗೆಯೇ ಅದನ್ನು ಒಂದು ಕಡೆ ಎತ್ತಿಡುತ್ತಿದ್ದೆವು. ಅವೆಲ್ಲವೂ ಬೆರೆತು ಸ್ವಲ್ಪ ಹುಳಿಯಾದ ನಂತರ ತಂಪಾದ ಪಾನೀಯವಾಗಿ ಸಿದ್ಧವಾಗುತ್ತಿತ್ತು. ಆಗ ಅದಕ್ಕೆ ಸ್ವಲ್ಪ ಉಪ್ಪು ಹಾಕಿ ಎಲ್ಲರಿಗೂ ಒಂದೊಂದು ಲೋಟವನ್ನು ಕುಡಿಯಲು ಕೊಡುತ್ತಿದ್ದೆವು. ಅದು ಎಷ್ಟೋ ಹಿತವಾಗೂ ಇರುತ್ತಿತ್ತು ಮತ್ತು ದಣಿವೂ ನಿವಾರಣೆಯಾಗುತ್ತಿತ್ತು. ಆಗ ನಮಗೆ ಯಾವ ರೋಗವೂ ಇರಲಿಲ್ಲ. ಈಗಲೂ ಎರಡು ಲೋಟ ಚೈತನ್ಯದಾಯಕವಾದ ಮತ್ತು ತಂಪಾದ ಆ ಗಂಜಿನೀರನ್ನು ಕೊಟ್ಟರೆ ನಮಗೆ ಸಾಕು. ಆದರೆ ಅದನ್ನು ಯಾರೂ ಮಾಡುವುದಿಲ್ಲ. 'ಅಯ್ಯೋ! ಸ್ವಾಮಿಗಳಿಗೆ ಈ ತಂಗಳು ಶೋರುತಣ್ಣಿ (ಗಂಜಿ ನೀರು) ಕೊಡುವುದೇ?' ಎನ್ನುತ್ತಾರೆ, ಏನು ಮಾಡುವುದು? ಈಗ ಇಂತಹ ದುಬಾರಿ ಪದಾರ್ಥವನ್ನು ಮಾಡುವುದಕ್ಕೆ ತಗಲುವ ಖರ್ಚು ಒಂದು ರೂಪಾಯಿಗಿಂತಲೂ ಕಡಿಮೆಯಿಲ್ಲ! ಇದೇ ಹಣದಲ್ಲಿ ರಾಗಿಯನ್ನು ಕೊಂಡು, ಬೀಸಿ ಹಿಟ್ಟು ಮಾಡಿಟ್ಟುಕೊಂಡರೆ ಒಂದು ತಿಂಗಳು ಕಾಲ ಅಂಬಲಿಯನ್ನು ಕಾಸಿ ಕುಡಿಯಬಹುದು. ಅದು ಎಷ್ಟೋ ಆರೋಗ್ಯದಾಯಕ ಮತ್ತು ಶಕ್ತಿವರ್ಧಕ. ಒಬ್ಬ ಮನುಷ್ಯನ ಒಪ್ಪೊತ್ತಿನ ಆ ಬಗೆಯ ದುಬಾರಿ ಊಟದ ಖರ್ಚಿನಲ್ಲಿ ಸರಳವಾದ ಗಂಜಿಯೂಟದಿಂದ ಒಬ್ಬರು ಒಂದು ತಿಂಗಳು ಕಳೆಯಬಹುದು. ಬೆಟ್ಟದಮೇಲಿರುವಾಗ ನಾನು ಹೀಗೆಯೇ ಮಾಡುತ್ತಿದ್ದೆ. ಆಗ ಎಷ್ಟೋ ಸುಖವಾಗಿದ್ದೆ. ಈಗ ಅದನ್ನು ಹೇಳಿದರೆ ಕೇಳುವವರು ಯಾರು? ದ್ರಾಕ್ಷಿಹಣ್ಣಿನ ಹುಳಿಗೊಜ್ಜು, ಟೊಮ್ಯಾಟೋ ಹಣ್ಣಿನ ತಿಳಿಸಾರು ಹೀಗೆಯೇ ಇನ್ನೂ ಏನೇನೋ ಪದಾರ್ಥಗಳನ್ನು ಮಾಡಿಕೊಡುತ್ತೇವೆ ಎನ್ನುತ್ತಾರೆ. ಅವೆಲ್ಲವೂ ನಮಗೇಕೆ? ನಾಳೆಯಿಂದ ಇವಾವುದನ್ನೂ ಕಳುಹಿಸಕೂಡದೆಂದು ಖಂಡಿತವಾಗಿ ಹೇಳಿಕಳುಹಿಸಿ" ಎಂದು ಆಜ್ಞಾಪಿಸಿದರು.

ಅಂದಿಗೆ ಅದು ನಿಂತುಹೋಯಿತು. "ಬೆಟ್ಟದ ಮೇಲಿರುವಾಗ ಬಿಲ್ವದ ಹಣ್ಣಿನ ತಿರುಳನ್ನೇ ತಿಂದು ಕೆಲವು ದಿನಗಳಿದ್ದೆ" ಎಂದು ಭಗವಾನರು

ಬಹಳ ಸಾರಿ ನಮಗೆ ಹೇಳಿದ್ದಾರೆ. ಯಾವ ಆಹಾರವನ್ನಾಗಲಿ ತಾವೊಬ್ಬರೇ ತೆಗೆದುಕೊಳ್ಳುವುದು ಅವರಿಗೆ ಖಂಡಿತವಾಗಿ ಸಾಧ್ಯವಾಗದು.

೧೬

22-10-47

## ಸ್ವಾಮಿತ್ವ

ಭಗವಾನರ ಶರೀರ ಇತ್ತೀಚೆಗೆ ಸ್ವಲ್ಪ ಸೊರಗಿದೆಯಲ್ಲವೇ? ಪುಷ್ಟಿಯಾದ ಆಹಾರವನ್ನು ತೆಗೆದುಕೊಳ್ಳದಿರುವುದೇ ಅದಕ್ಕೆ ಕಾರಣವೆಂದು ಕೆಲವು ಭಕ್ತರುಗಳ ಅಭಿಪ್ರಾಯ. ಈ ಸುದ್ದಿಯನ್ನು ಕೇಳಿದ ಬಂಗಾಳದ ಯುವತಿಯೊಬ್ಬಳು ನಿನ್ನೆ ಮಧ್ಯಾಹ್ನ ಕೆಲವು ಬೆಂಗಳೂರು ಸೀಬೆ (ಪೇರಳೆ) ಹಣ್ಣುಗಳನ್ನು ಹೋಳುಗಳನ್ನಾಗಿ ಕತ್ತರಿಸಿ, ಉಪ್ಪು ಮತ್ತು ಖಾರವನ್ನು ಬೆರೆಸಿ ಭಗವಾನರ ಬಳಿಗೆ ತಂದು, "ಭಗವಾನರು ಬಹಳವಾಗಿ ಸೊರಗಿದ್ದಾರೆ, ಇಂತಹ ಹಣ್ಣುಗಳನ್ನು ತೆಗೆದುಕೊಳ್ಳುವುದು ಆರೋಗ್ಯಕ್ಕೆ ಒಳ್ಳೆಯದು. ಇವುಗಳನ್ನು ದಯಮಾಡಿ ಸ್ವೀಕರಿಸಬೇಕು" ಎಂದು ಕೇಳಿಕೊಂಡರು. ಭಗವಾನರು ನಗುತ್ತ "ಯಾರು ಸೊರಗಿರುವುದು? ನೀವೋ ಅಥವಾ ನಾನೋ?" ಎಂದು ಕೇಳಿದರು. ಆಕೆ "ಭಗವಾನರೇ" ಎಂದರು. ಭಗವಾನರು "ಚೆನ್ನಾಗಿದೆ. ತೂಕಮಾಡಿದರೆ ಯಾರು ಸೊರಗಿದ್ದಾರೆಂದು ತಿಳಿಯುತ್ತದೆ. ಬೇಕಿದ್ದರೆ ನೀವು ಅಂತಹವುಗಳನ್ನು ಪ್ರತಿನಿತ್ಯವೂ ತೆಗೆದುಕೊಳ್ಳಿ. ಇಂತಹ ಅಭ್ಯಾಸಗಳೆಲ್ಲ ನಮಗೇತಕ್ಕೆ? ಇಂದು ತಂದಿದ್ದೀರಿ, ಸರಿ; ಇನ್ನು ಮುಂದೆ ತರಬೇಡಿ" ಎನ್ನುತ್ತ ಕೆಲವು ಹೋಳುಗಳನ್ನು ತೆಗೆದುಕೊಂಡು ಸೇವಕರೊಡನೆ "ಇದೋ ನೋಡಿ! ಆಕೆ ಎಷ್ಟು ಕೃಶವಾಗಿದ್ದಾರೆ. ಮೊದಲು ಆಕೆಗೆ ಸ್ವಲ್ಪ ಹೆಚ್ಚಾಗಿಯೇ ಕೊಟ್ಟು ನಂತರ ಉಳಿದಿರುವುದನ್ನು ಎಲ್ಲರಿಗೂ ಹಂಚಿಬಿಡಿ" ಎಂದು ಹೇಳಿದರು.

ಭಗವಾನರೊಡನೆ ಸಲಿಗೆಯಿಂದಿರುವವರೊಬ್ಬರು, "ಇತ್ತೀಚೆಗೆ ಭಗವಾನರು ತೆಗೆದುಕೊಳ್ಳುವ ಆಹಾರದ ಪ್ರಮಾಣವನ್ನು ಬಹಳವಾಗಿ

ಕಡಿಮೆ ಮಾಡಿದ್ದಾರೆ. ಹೀಗಾದರೆ ಹೇಗೆ?" ಎಂದರು. ಭಗವಾನರು "ಓಹೋ! ಹೀಗೆಂದು ನಿಮಗೆ ಯಾರು ಹೇಳಿದರು? ನನಗೆಷ್ಟು ಬೇಕೋ ಅಷ್ಟನ್ನು ತೆಗೆದುಕೊಳ್ಳುತ್ತಲೇ ಇದ್ದೇನೆ. ಹೆಚ್ಚು ತಿಂದು ಶರೀರವನ್ನು ಬೆಳೆಸಿದರೆ ಏನು ಪ್ರಯೋಜನ? ಸ್ಥೂಲಕಾಯರಾಗಿರುವವರು ಎಷ್ಟೋಂದು ಬಗೆಯ ಖಾಯಿಲೆಗಳಿಂದ ನರಳುತ್ತಿರುತ್ತಾರೆ, ಗೊತ್ತೇನು? ಆಹಾರವನ್ನು ಹೆಚ್ಚಾಗಿ ಸೇವಿಸುವವರ ಖಾಯಿಲೆಗಳಿಗೆ ಶಕ್ತಿಯೂ ಹೆಚ್ಚು. ಕಡಿಮೆ ಆಹಾರ ತೆಗೆದುಕೊಂಡರೆ ಖಾಯಿಲೆಗಳ ಶಕ್ತಿಯೂ ಕಡಿಮೆಯಾಗುತ್ತದೆ" ಎಂದರು. ಆಗ ಇನ್ನೊಬ್ಬರು "ಸಾರು (ರಸಂ) ಮತ್ತು ಮಜ್ಜಿಗೆ ಇವುಗಳನ್ನು ಕುಡಿಯುವುದನ್ನೂ ಬಿಟ್ಟುಬಿಟ್ಟಿದ್ದೀರಲ್ಲಾ, ಏಕೆ?" ಎಂದು ಕೇಳಿದರು. ಭಗವಾನರು "ಏತಕ್ಕೆ ಎಂದು ಕೇಳಿದಿರಾ? ಊಟದ ಸಮಯದಲ್ಲಿ ಬಡಿಸುವ ರೀತಿಯನ್ನು ನೋಡಿದರೆ ಆಗ ನಿಮಗೇ ಅದರ ಕಾರಣ ತಿಳಿಯುತ್ತದೆ. ದೊಡ್ಡ ದೊಡ್ಡ ಸೌಟುಗಳ ಸಮೇತ ಬಕೆಟ್ಟುಗಳಲ್ಲಿ ಮಜ್ಜಿಗೆಯನ್ನು ತುಂಬಿಕೊಂಡು ಬಂದು ಬಡಿಸುತ್ತಾರೆ. ನಮ್ಮ ಬಳಿ ಬಂದಾಗ ಆ ಸೌಟು ತುಂಬಿರುತ್ತದೆ. ಆದರೆ ಅಕ್ಕಪಕ್ಕದ ಎಲೆಗಳ ಬಳಿ ಬಂದಾಗ ಆ ಸೌಟನ್ನು ಮಜ್ಜಿಗೆಯಲ್ಲಿ ಅರ್ಧ ಮುಳುಗಿಸಿ ಅದರಲ್ಲಿ ಅರ್ಧವನ್ನು ಆ ಎಲೆಗಳಿಗೆ ಬಡಿಸಿ ಹಾಗೆಯೇ ಮುಂದಕ್ಕೆ ಹೋಗಿಬಿಡುತ್ತಾರೆ. ಅದನ್ನು ನೋಡಿದಾಗ ನಮಗೂ ಹೊಟ್ಟೆ ತುಂಬಿದಂತಾಗಿ, ಅಯ್ಯೋ ಸಾಕು! ಎನ್ನುವಷ್ಟರಮಟ್ಟಿಗೆ ಜುಗುಪ್ಸೆಯಾಗುತ್ತದೆ. ಆದಕಾರಣ ನಮಗೆ ಅರ್ಧ ಸೌಟು ಮಜ್ಜಿಗೆಯೇ ಸಾಕು ಎಂಬುದಾಗಿ ನಿರ್ಧರಿಸಿದ್ದೇವೆ" ಎಂದರು.

ಆಗ ಆ ಭಕ್ತರು "ಹೋಗಲಿ, ಹಣ್ಣಿನ ರಸವನ್ನಾದರೂ ತೆಗೆದುಕೊಳ್ಳಬಾರದೇನು?" ಎಂದು ಕೇಳಲು, ಭಗವಾನರು "ಅದೋ! ಮೊದಲಾಯಿತು. ಎಲ್ಲರೂ ಒಂದೇ ಬಗೆಯಾಗಿ ಹೇಳುತ್ತಾರೆ. ಅದು ಹೇಗೆ ಸಾಧ್ಯ?" ಎಂದರು. ಅವರು "ಇದೇನು ಭಗವಾನ್? ಇಲ್ಲಿಗೆ ಎಷ್ಟೋಂದು ಹಣ್ಣುಗಳು ಬರುತ್ತಿರುತ್ತವೆ? ಹೇಗೆ ಸಾಧ್ಯ ಎಂದರೆ ಏನರ್ಥ? ಅಯಾಚಿತವಾಗಿ ಬಂದಿರುವುದನ್ನು ತೆಗೆದುಕೊಳ್ಳಬಹುದೆಂದು ನೀವೇ ಆಗಾಗ ಹೇಳುತ್ತಿರುತ್ತೀರಿ?" ಎಂದರು. ಆಗ ಭಗವಾನರು "ಓಹೋ! ತೆಗೆದುಕೊಳ್ಳಬಹುದು ಎಂದರೆ ಪಕ್ಕದಲ್ಲಿರುವವರನ್ನು ಬಿಟ್ಟುಬಿಡಬಹುದು ಎಂದೇನು?" ಎಂದು ಕೇಳಿದರು. ಅವರು

" ಆಗಲಿ ; ಎಷ್ಟೋ ಬಗೆಯ ಹಣ್ಣುಗಳು ಬರುತ್ತಲೇ ಇರುತ್ತವೆ. ಎಲ್ಲರಿಗೂ ಹಂಚಿಯೇ ತೆಗೆದುಕೊಳ್ಳುವುದಕ್ಕೆ ಏನು ಅಡ್ಡಿ? " ಎಂದರು. ಭಗವಾನರು " ಸರಿಹೋಯಿತು ! ಎಲ್ಲರಿಗೂ ಕೊಡಲು ಇಲ್ಲಿ ನಮಗೇನಿದೆ ಅಧಿಕಾರ? ದೇವರಿಗೆ ನೈವೇದ್ಯವನ್ನು ತೋರಿಸುವಂತೆ ಅವುಗಳೆಲ್ಲವನ್ನೂ ನಮಗೆ ತೋರಿಸಿ ನಂತರ ತೆಗೆದುಕೊಂಡುಹೋಗಿ ಉಗ್ರಾಣದಲ್ಲಿಟ್ಟು ಬೀಗ ಹಾಕುತ್ತಾರೆ. ಆಮೇಲೆ ಅವರೇ ಏನಾದರೂ ಕೊಟ್ಟರೆ ಉಂಟು ಇಲ್ಲದಿದ್ದರೆ ಇಲ್ಲ. ಬೀಗದಕೈ ಉಗ್ರಾಣದ ಅಧಿಕಾರಿಯ ಸ್ವಾಧೀನದಲ್ಲಿರುತ್ತದೆ. ಪ್ರತಿಸಲವೂ ಅವರನ್ನು ಯಾರು ಹೋಗಿ ಕೇಳುತ್ತಾರೆ? ಹೀಗೆಯೇ ಪ್ರತಿಯೊಂದಕ್ಕೂ ಒಬ್ಬೊಬ್ಬರು ಅಧಿಕಾರಿಗಳಿದ್ದಾರೆ. ಇಲ್ಲಿ ನಮಗೆ ಯಾವ ಕೆಲಸವೂ ಇಲ್ಲ ; ಹಾಗೆಯೇ ಯಾವ ಸ್ವಾತಂತ್ರ್ಯವೂ ಇಲ್ಲ. ಆದರೆ ಒಂದು ವಿಷಯ ; ಗುಡಿಯಲ್ಲಿರುವ ದೇವರಿಗಿಂತ ನಾವು ಸ್ವಲ್ಪ ಉತ್ತಮ. ಹೋದಷ್ಟು ಹೋಗಿ ಉಳಿದಿರುವುದನ್ನು ಹತ್ತುಮಂದಿಗೆ ಹಂಚುವಾಗ ನಮಗೂ ಸ್ವಲ್ಪ ಭಾಗ ಸಿಗುತ್ತದೆ. ಸ್ವಾಮಿತ್ವ ಎಂದರೆ ಇದೇ " ಎಂದು ನಗುತ್ತಲೇ ಉತ್ತರವಿತ್ತರು.

ಇಷ್ಟರಲ್ಲಿ ಶಿವಾನಂದಂ ಅಲ್ಲಿಗೆ ಬಂದನು. ಹದಿನೈದು ದಿವಸಗಳ ಹಿಂದೆ ಯಾರೋ ಒಬ್ಬರು ಕಾಳುಮೆಣಸುಗಳನ್ನು ತಂದಿತ್ತಾಗ ಭಗವಾನರು ಅವುಗಳಿಗೆ ಅಳಲೆಕಾಯಿ, ಪೆಟ್ಲುಪ್ಪು ಮೊದಲಾದುವುಗಳನ್ನು ಬೆರೆಸಿ ಪುಡಿಮಾಡಿಸಿ, ಸಣ್ಣ ಸಣ್ಣ ಮಾತ್ರೆಗಳನ್ನಾಗಿ ಮಾಡಿಸಿ, ಒಣಗಿಸಿಡಲು ಹೇಳಿದರಂತೆ. ಹಾಗೆ ಒಣಗಿಸಿದ ಆ ಮಾತ್ರೆಗಳನ್ನು ಇಂದು ಒಂದು ಸೀಸೆಯಲ್ಲಿ ಹಾಕಿಟ್ಟಿರುವೆನೆಂದು ಶಿವಾನಂದನು ತಿಳಿಸಿ, " ಅದನ್ನು ತಂದುಕೊಡಲೇನು ? " ಎಂದು ಭಗವಾನರನ್ನು ಕೇಳಿದನು. ಅದು ಕಫಕ್ಕೆ ಒಳ್ಳೆಯದೆಂದು ಚಳಿಗಾಲದಲ್ಲಿ ಭಗವಾನರು ಆಗಾಗ ಉಪಯೋಗಿಸುತ್ತಿರುತ್ತಾರೆ. ಹದಿನೈದು ದಿವಸಗಳಿಂದ ಇದರ ಸುದ್ದಿಯನ್ನೇ ಎತ್ತದೆ ಇಂದು ಆ ವಿಷಯವನ್ನು ಕೇಳಲು, ಭಗವಾನರು ನಗುತ್ತಲೇ " ಓಹೋ ! ಇಂದು ಇದು ನಿನ್ನ ನೆನಪಿಗೆ ಬಂದಿತೇನು ? ಸರಿ, ಸರಿ. ಬಹುಶಃ ಸ್ವಾಮಿಗಳೇನಾದರೂ ಕೇಳುತ್ತಾರೋ ಇಲ್ಲವೋ ನೋಡೋಣ ಎಂದು ನಮ್ಮನ್ನು ಇವರು ಪರೀಕ್ಷಿಸಿರುತ್ತಾರೆ. ಒಂದು ವೇಳೆ ನಾವೇನಾದರೂ ಕೇಳಿದರೆ ' ಇದೇನಪ್ಪಾ ! ಈ ಸ್ವಾಮಿಯು ಎಲ್ಲವನ್ನೂ ವಿಚಾರಿಸಲು ಮೊದಲು ಮಾಡಿದ್ದಾರೆ ! ' ಎಂದು ಭಾವಿಸುತ್ತಾರೆ. ಸ್ವಾಮಿಗೆ ನಮ್ಮ ಮೇಲೆ ಪ್ರೀತಿ

ಇದೆಯೋ ಇಲ್ಲವೋ! ನಮ್ಮನ್ನೇನಾದರೂ ವಿಚಾರಿಸುತ್ತಾರೆಯೋ ಇಲ್ಲವೋ; ನೋಡೋಣ ಎಂದು ಕೆಲವರು ಕಾಯುತ್ತಾರೆ. ಏನು ಮಾಡುವುದು? ಇವರೆಲ್ಲರ ಯೋಗ್ಯತಾಪತ್ರ (ಸರ್ಟಿಫಿಕೇಟ್) ನಮಗೆ ಬೇಕು. ಇಲ್ಲಿ ಒಂದು ನಮಸ್ಕಾರವನ್ನು ಹಾಕಿದರೆ ತೀರಿತು. ನಂತರ ಅವರು ಹೇಳಿದಂತೆ ಸ್ವಾಮಿಯು ಕೇಳಬೇಕಾದದ್ದೇ. ಸ್ವಾಮಿತ್ವ ಎಂದರೆ ಏನೋ ಬಹಳ ಸುಖವೆಂದು ಜನ ತಿಳಿದುಕೊಂಡಿದ್ದಾರೆ. ಇದೋ! ಸ್ವಾಮಿತ್ವ ಎಂದರೆ ಇದೇ. 'ಸ್ವಾಮಿತ್ವ' ಎಂಬುದರ ಬಗ್ಗೆ ಒಂದು ಗ್ರಂಥವನ್ನು ರಚಿಸಿದರೆ ಬಹಳ ಸ್ವಾರಸ್ಯವಾಗಿರುತ್ತದೆ" ಎಂದರು.

ಆ ಭಕ್ತರು "ಭಗವಾನರು ಬಹಳ ಹಾಸ್ಯವಾಗಿ ಮಾತಾಡುತ್ತಿದ್ದಾರೆ!" ಎಂದರು. ಭಗವಾನರು ಮುಗುಳುನಗುತ್ತ "ಇದರಲ್ಲಿ ಹಾಸ್ಯವೇನಿದೆ? ಎಲ್ಲವೂ ಯಥಾರ್ಥವೇ. 'ಸ್ವಾಮಿಯು ಮೆತ್ತೆಯನ್ನು ಹಾಸಿರುವ ಮತ್ತು ಒರಗುದಿಂಬುಗಳಿಂದ ಕೂಡಿದ ಸುಖಾಸನದ ಮೇಲೆ ಹಾಯಾಗಿ ಕುಳಿತು ಕೊಂಡಿರುತ್ತಾರೆ, ಅವರಿಗೇನು?' ಎನ್ನುವವರು ಎಷ್ಟೋ ಮಂದಿ ಇದ್ದಾರೆ. ನಮ್ಮ ಪಾಡು ಅವರಿಗೇನು ಅರ್ಥವಾಗುತ್ತದೆ? ಅದಕ್ಕೇ 'ಸ್ವಾಮಿತ್ವ' ಎಂಬ ಗ್ರಂಥವೊಂದನ್ನು ಬರೆದರೆ ಒಳ್ಳೆಯದೆಂದು ಹೇಳುತ್ತಿದ್ದೇನೆ. ಈ ಐವತ್ತು ವರ್ಷಗಳ ಜೀವಿತದಲ್ಲಿ ನಡೆದ ಘಟನೆಗಳೆಲ್ಲವನ್ನೂ ಬರೆದರೆ ಮಹಾಭಾರತದಂತಹ ದೊಡ್ಡ ಗ್ರಂಥವೇ ಆಗುತ್ತದೆ. ಯಾರಾದರೂ ಬರೆಯುವವರಿದ್ದರೆ ಬರೆಯಬಹುದು" ಎಂದರು. ಆ ಭಕ್ತರು "ಇವುಗಳನ್ನೆಲ್ಲ ಯಾರು ಬರೆಯುತ್ತಾರೆ?" ಎಂದು ಕೇಳಿದಾಗ ಭಗವಾನರು "ಏಕೆ? 'ಹೌದು ಹೌದು; ಸರಿ ಸರಿ' ಎಂದರೇನೇ ಸ್ವಾಮಿತ್ವ ಸಿದ್ಧಿಸುವುದೆಂದು ಆಗ ಎಲ್ಲರಿಗೂ ಗೊತ್ತಾಗುತ್ತದೆ. ಇದನ್ನು ಏಕೆ ಬರೆಯಬಾರದು?" ಎಂದು ಹೇಳುತ್ತ ನನ್ನೆಡೆಗೆ ತಿರುಗಿನೋಡಿ, "ಏನು? ನೀನು ಬೇಕಾದರೆ ಬರೆಯಬಹುದು" ಎಂದು ಹೇಳಿ ನಕ್ಕರು.

## ಲಕ್ಷ್ಯದೃಷ್ಟಿ

ನಿನ್ನೆ ತಾಯಿಕೋತಿಯೊಂದು ತನ್ನ ಪುಟ್ಟ ಮರಿಯನ್ನೆತ್ತಿಕೊಂಡು ಬಂದು ಸಭಾಂಗಣದಲ್ಲಿ ಭಗವಾನರ ಸುಖಾಸನದ ಬಳಿಯಿದ್ದ ಕಿಟಕಿಯ ಹೊರಗೆ ನಿಂತುಕೊಂಡಿತು. ಭಗವಾನರು ಏನನ್ನೋ ಓದುತ್ತಿದ್ದ ಕಾರಣ ಅದನ್ನು ಗಮನಿಸಲಿಲ್ಲ. ಅದು ಸ್ವಲ್ಪಸಮಯ ಕಾದುನಿಂತು 'ಕಿಚಕಿಚ' ಎಂದು ಶಬ್ದ ಮಾಡಿತು. ಆಗ ಭಗವಾನರ ಸೇವಕರೊಬ್ಬರು 'ನಡಿನಡಿ' ಎಂದು ಅದನ್ನು ಗದರಿಸಿದರು. ಆದರೆ ಅದು ಅಲ್ಲಿಂದ ಕದಲಲಿಲ್ಲ. ಆಗ ಭಗವಾನರು ತಲೆಯೆತ್ತಿ ನೋಡಿ ಆ ಸೇವಕನನ್ನು ಕುರಿತು "ಸ್ವಲ್ಪ ತಾಳು. ಅದು ತನ್ನ ಮಗುವನ್ನು ಭಗವಾನರಿಗೆ ತೋರಿಸಬೇಕೆಂದು ಬಂದಿದೆ. ಇವರೆಲ್ಲರೂ ತಮ್ಮ ತಮ್ಮ ಮಕ್ಕಳುಗಳನ್ನು ಇಲ್ಲಿಗೆ ತಂದು ತೋರಿಸುವುದಿಲ್ಲವೇ? ಅದರ ಮಗು ಅದಕ್ಕೆ ಹೆಚ್ಚು, ನೋಡಿ! ಎಷ್ಟು ಪುಟ್ಟ ಮಗು?" ಎಂದು ಅದರೆಡೆಗೆ ತಿರುಗಿ "ಏನಮ್ಮಾ! ಏನು? ನಿನ್ನ ಕಂದನನ್ನು ತೋರಿಸಲು ಕರೆದುಕೊಂಡು ಬಂದಿದ್ದೀಯಾ? ಬಹಳ ಒಳ್ಳೆಯದು" ಎಂದು ಅದನ್ನು ಪ್ರೀತಿಯಿಂದ ಮಾತಾಡಿಸಿ ಅದಕ್ಕೆ ಬಾಳೆಹಣ್ಣನ್ನು ಕೊಡಿಸಿ ಕಳುಹಿಸಿಕೊಟ್ಟರು.

ಇದೇ ತಿಂಗಳು ಆಗಸ್ಟ್ ಹದಿನೈದರಂದು ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ ಇಲ್ಲೂ ಧ್ವಜಾರೋಹಣವನ್ನು ಆಚರಿಸಿದರು. ಅದಕ್ಕೆ ಸ್ವಲ್ಪ ದಿನಗಳ ಹಿಂದೆ, 11–12ನೇ ತಾರೀಖು ಸಾಯಂಕಾಲ ಐದು ಗಂಟೆಗೆ ಭಗವಾನರು ಸ್ವರ್ಣೋತ್ಸವ ಪರ್ಣಶಾಲೆಯಲ್ಲಿ ಕುಳಿತಿದ್ದಾಗ ವಾನರಸೈನ್ಯವೊಂದು ಹಣ್ಣಿಗೋಸ್ಕರವಾಗಿ ಗಲಾಟೆಯನ್ನು ಮಾಡಲು, ಕೃಷ್ಣಸ್ವಾಮಿಯು ಅವುಗಳನ್ನು ಗದರಿಸಿ ಓಡಿಸಲು ಯತ್ನಿಸಿದನು. ಭಗವಾನರು ಅದನ್ನು ಕಂಡು "ನೋಡು! 15ನೇ ತಾರೀಖು ಅವುಗಳಿಗೂ ಸ್ವಾತಂತ್ರ್ಯದ ಉತ್ಸವವೇ. ಅಂದು ಅವುಗಳನ್ನು ಗದರಿಸಿ ಅಟ್ಟದೆ ಒಳ್ಳೆಯ ಔತಣವನ್ನು ನೀಡಬೇಕು, ತಿಳಿಯಿತೇ?" ಎಂದು ಹೇಳಿದರು. 14ನೇ ತಾರೀಖು ಆಶ್ರಮವಾಸಿಗಳು ಧ್ವಜಾರೋಹಣಕ್ಕೆ ಸಿದ್ಧತೆ ಮಾಡುತ್ತ ಅತ್ತಿಂದಿತ್ತ ಓಡಾಡುತ್ತಿದ್ದಾರೆ;

ಯಥಾಪ್ರಕಾರ ವಾನರಸೈನ್ಯವು ಬರಲು ಸೇವಕರೊಬ್ಬರು ಅವುಗಳನ್ನು ಓಡಿಸಲು ಪ್ರಯತ್ನಿಸುತ್ತಿದ್ದಾರೆ. ಭಗವಾನರು ಅದನ್ನು ನೋಡಿ ನಗುತ್ತ "ಬೇಡಿ! ಅವುಗಳನ್ನು ಹಾಗೆ ಓಡಿಸಬೇಡಿ! ಅವುಗಳಿಗೆ ಮಾತ್ರ ಸ್ವರಾಜ್ಯ ಬರಲಿಲ್ಲವೇನು? ಕಡಲೆ, ಪುರಿ ಮೊದಲಾದುವುಗಳನ್ನು ಕೊಟ್ಟು ಅವರಿಗೂ ಔತಣವನ್ನು ಮಾಡಬೇಕೇ ಹೊರತು ಅವುಗಳನ್ನು ಯಾರಾದರೂ ಓಡಿಸುತ್ತಾರೆಯೇ?" ಎಂದರು. ಆಗ ಆ ಸೇವಕನು "ಸ್ವಾತಂತ್ರ್ಯ ದಿನಾಚರಣೆ ನಾಳೆ ಅಲ್ಲವೇ? ಇಂದೇನು ವಿಶೇಷ?" ಎಂದಾಗ, ಭಗವಾನರು "ಓಹೋ! ನೀವುಗಳೆಲ್ಲರೂ ನಾಳಿನ ಉತ್ಸವಕ್ಕೆ ಇಂದು ಸಿದ್ಧತೆ ಮಾಡುತ್ತಿರುವಾಗ ಅವುಗಳು ಮಾತ್ರ ಸುಮ್ಮನಿರಬೇಕೇನು? ಅವುಗಳ ಸಿದ್ಧತೆ ಅವುಗಳಿಗೆ. ಅದಕ್ಕೇನಂತೆ?" ಎಂದರು.

ಇನ್ನು ಕೆಲವು ಬಾರಿ ಏನು ನಡೆಯುವುದು ಗೊತ್ತೇನು? ಭಗವಾನರು ಸಭಾಂಗಣದ ಸುಖಾಸನದಲ್ಲಿ ಕುಳಿತಿದ್ದರೆ ಅವರ ಕಾಲಿನ ಬಳಿಯಿರುವ ಕಪಾಟಿನ ಹತ್ತಿರವೋ, ಅಂಗಳದಲ್ಲಿ ಕುಳಿತಿದ್ದರೆ ಅವರ ತಲೆಯ ಹತ್ತಿರವೋ, ಭಕ್ತರು ಅರ್ಪಿಸುವ ಹಣ್ಣುಗಳನ್ನಿಡಲು ಯಾರಾದರೊಬ್ಬರು ಸೇವಕರು ಒಂದು ಬುಟ್ಟಿಯನ್ನು ಇಟ್ಟುಕೊಂಡು ಕುಳಿತುಕೊಳ್ಳುತ್ತಾರೆ. ಆ ಸೇವಕರು ಆಗಾಗ ಕಣ್ಣುಮುಚ್ಚಿ ತೂಕಡಿಸುತ್ತಲೋ ಅಥವಾ ಆಕಾಶವಾಣಿಯ ಸಂಗೀತವನ್ನು ಕೇಳುತ್ತಲೋ ಅನ್ಯಮನಸ್ಕರಾಗಿರುವ ಸಮಯವನ್ನೇ ಕಾದು, ಈ ವಾನರವೀರರು ಬುಟ್ಟಿಯಲ್ಲಿಟ್ಟಿರುವ ಹಣ್ಣುಗಳನ್ನು ಎತ್ತಿಕೊಂಡು ಹೋಗುವಾಗ ಸಭಿಕರಲ್ಲಿ ಯಾರಾದರೂ ಅವುಗಳನ್ನು ಗದರಿಸುತ್ತಾರೆ. ಆಗ ಭಗವಾನರು ನಗುತ್ತ "ಇವರು ತದೇಕನಿಷ್ಠೆಯಿಂದ ಸಮಾಧಿಮಗ್ನರಾಗಿ ತೂಕಡಿಸುತ್ತಿರುವಾಗ ಅವರು ಬಂದು ಇವರ ಕೆಲಸವನ್ನು ನೋಡಿಕೊಳ್ಳುತ್ತಿದ್ದಾರೆ. ಯಾರಾದರೊಬ್ಬರು ಈ ಕೆಲಸವನ್ನು ನೋಡಿಕೊಳ್ಳಬೇಕು ಅಲ್ಲವೆ? ಇವರು ಹಣ್ಣುಗಳನ್ನು ಬುಟ್ಟಿಯೊಳಗೆ ಹಾಕಿದರೆ ಅವರು ಅವುಗಳನ್ನು ಹೊಟ್ಟೆಯೊಳಗೆ ಹಾಕುತ್ತಾರೆ, ಅಷ್ಟೇ ವ್ಯತ್ಯಾಸ" ಎನ್ನುತ್ತ "ಇವರು ಗಾನರಸವನ್ನು ಆಸ್ವಾದಿಸುತ್ತಿದ್ದರೆ ಅವರು ಫಲರಸವನ್ನು ಆಸ್ವಾದಿಸುತ್ತಿದ್ದಾರೆ; ಇದು ಒಳ್ಳೆಯದೇ ಅಲ್ಲವೇನು?" ಎನ್ನುತ್ತಾರೆ. ಯಾರೂ ಸೇವಕರುಗಳು ಇಲ್ಲದಿದ್ದಾಗ ಹೀಗೇನಾದರೂ ನಡೆದರೆ ಅವರು

ಬಂದಕೂಡಲೆ "ಏನಯ್ಯಾ! ನೀವಾರೂ ಇಲ್ಲಿರಲಿಲ್ಲ. ಆದುದರಿಂದ ನಿಮ್ಮ ಕೆಲಸವನ್ನು ಇವರು ನೋಡಿಕೊಳ್ಳುತ್ತಿದ್ದಾರೆ. ನಿಮ್ಮ ಕೆಲಸದಲ್ಲಿ ಸಹಾಯ ಮಾಡುತ್ತಿದ್ದಾರೆ. ಆದಕಾರಣ ನೀವು ಇನ್ನೂ ಸ್ವಲ್ಪ ಕಾಲ ವಿಶ್ರಾಂತಿಯನ್ನು ತೆಗೆದುಕೊಳ್ಳಬಹುದು. ಬೆಟ್ಟದ ಮೇಲೆ ನಾವಿರುವಾಗ ಹೆಚ್ಚಾಗಿ ನಮ್ಮೊಡನೆ ಇರುತ್ತಿದ್ದವರು ಇವರೇ. ಈಗ ನೀವು ಅವರನ್ನು ಅಟ್ಟುತ್ತಿದ್ದೀರಿ. ಆದರೆ ಆಗ ಅವರದೇ ರಾಜ್ಯ" ಎಂದು ಹೇಳುತ್ತಿರುತ್ತಾರೆ.

ಕೆಲವು ಸಮಯ ಇಲ್ಲಿಗೆ ಹೊಸ ಭಕ್ತರುಗಳು ಬರುವಾಗ, ತರುವ ಹಣ್ಣುಗಳನ್ನು ಈ ಕಪಿವೀರರು ದಾರಿಯಲ್ಲೇ ಅಡ್ಡಹಾಕಿ ಕಿತ್ತುಕೊಂಡು ಹೋಗುತ್ತಾರೆ. ಮತ್ತೆ ಕೆಲವು ಬಾರಿ ಪ್ರಸಾದರೂಪವಾಗಿ ಹಿಂದಿರುಗಿಸಿದ ಹಣ್ಣುಗಳನ್ನು ಭಕ್ತರು ಸಭಾಂಗಣದಲ್ಲಿ ಹತ್ತಿರಿಟ್ಟುಕೊಂಡು ಕುಳಿತಿರುವಾಗ ತಟಕ್ಕನೆ ಅವುಗಳನ್ನು ಎಗರಿಸಿಕೊಂಡು ಹೋಗುವುದೇ ಮೊದಲಾದುವುಗಳನ್ನು ಮಾಡುತ್ತಿರುತ್ತಾರೆ. ಆಗ ಭಗವಾನರು ನಗುತ್ತ "ಅವರ ಪಾಲಿನದನ್ನು ಅವರು ತೆಗೆದುಕೊಂಡಿದ್ದಾರೆ. ನಿಮಗೆ ಏಕೆ ಅವುಗಳ ಮೇಲೆ ಸಿಟ್ಟು? ಅವುಗಳದು ಲಕ್ಷ್ಯದೃಷ್ಟಿ. ಇಲ್ಲಿರುವ ಹಣ್ಣುಗಳನ್ನು ಹೇಗಾದರೂ ಪತ್ತೆಹಚ್ಚಿ ತಮ್ಮ ಪಾಲಿನದನ್ನು ತಾವು ತೆಗೆದುಕೊಂಡು ಹೋಗುತ್ತಾರೆ. ನಮ್ಮ ದೃಷ್ಟಿ ಯಾದರೋ ನಾನಾಕಡೆಗೆ ಹರಿಯುತ್ತಿರುತ್ತದೆ. ಇವುಗಳಿಗೆ ಮಾತ್ರ ಅವುಗಳಮೇಲೆಯೇ ದೃಷ್ಟಿ. ಆದುದರಿಂದಲೇ ವೇದಾಂತದ ಪರಿಭಾಷೆಯಲ್ಲಿ ಲಕ್ಷ್ಯದೃಷ್ಟಿಗೆ ಉದಾಹರಣೆಯಾಗಿ ವಾನರದೃಷ್ಟಿಯನ್ನು ಹೇಳುತ್ತಾರೆ. ಗುರುವಿನ ಕಣ್ಣುಸಂಜ್ಞೆಯಿಂದಲೇ ಅವರ ಇಂಗಿತವನ್ನು ಅರಿಯುವ ಶಕ್ತಿ ಶಿಷ್ಯನಾದವನಿಗೆ ಇರಬೇಕು. ಹಾಗಿಲ್ಲದಿದ್ದರೆ ಅವನಿಗೆ ಸರಿಯಾದ ಫಲ ದೊರಕುವುದೇನು?" ಎಂದು ಒಂದು ಬಾರಿ ನಮಗೆ ತಿಳಿಸಿ ಹೇಳಿದ್ದರು.

26–10–47

## ಉಪಾಧಿ

ಕೆಲವು ದಿನಗಳ ಹಿಂದೆ ಇಲ್ಲಿಗೆ ಬಂದವರೊಬ್ಬರು ಇಂದು ಬೆಳಿಗ್ಗೆ ವೇದ-ಪಾರಾಯಣವು ಮುಗಿದನಂತರ ಭಗವಾನರನ್ನು ಸಮೀಪಿಸಿ, “ಸ್ವಾಮೀ! ಜ್ಞಾನಿಯಾದವನು ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರೂ, ಅವನು ನಿಜವಾಗಿ ಏನನ್ನೂ ಮಾಡುತ್ತಿಲ್ಲ ಎಂದು ಹೇಳುತ್ತಾರೆ; ಅದು ಹೇಗೆ ಸರಿ-ಹೊಂದುತ್ತದೆ?” ಎಂದು ಪ್ರಶ್ನಿಸಿದರು. ಭಗವಾನರು ಅದಕ್ಕೆ ಹೀಗೆ ಉತ್ತರಿಸಿದರು: “ಹೇಗೆ ಎಂದಿರಾ? ಅದಕ್ಕೊಂದು ಕಥೆಯಿದೆ. ಇಬ್ಬರು ಸ್ನೇಹಿತರುಗಳು ಯಾವುದೋ ಕೆಲಸಕ್ಕಾಗಿ ಜತೆಗೂಡಿ ಹೋಗಿದ್ದಾಗ ರಾತ್ರಿಯಾದ ಕಾರಣ ಒಂದು ಛತ್ರದಲ್ಲಿ ತಂಗಿದರು. ಆಗ ಒಬ್ಬನಿಗೆ ಗಾಢವಾದ ನಿದ್ರೆ ಹತ್ತಿತು. ಇನ್ನೊಬ್ಬಾತನಿಗೆ ಒಂದು ಕನಸು ಬಿತ್ತು. ಅದರಲ್ಲಿ ಅವನೂ ಅವನ ಸ್ನೇಹಿತನೂ ಜತೆಯಾಗಿ ಎಷ್ಟೋ ಕಾಲ, ಎಷ್ಟೋ ದೇಶಗಳನ್ನು ತಿರುಗಿ, ಏನೇನೋ ಕೆಲಸಗಳನ್ನು ಮಾಡಿದಂತೆ ಕಂಡನು. ಬೆಳಗಾದ ನಂತರ ಮೊದಲನೆಯವನು ಎದ್ದು ಕುಳಿತು ತನಗಾಗುತ್ತಿದ್ದ ಗಾಢಸ್ವಪ್ನದ ದೆಸೆಯಿಂದ ಆ ಭ್ರಾಂತಿಯು ತನ್ನನ್ನು ಇನ್ನೂ ಬಿಟ್ಟಿರದ ಕಾರಣ, ‘ಏನಯ್ಯಾ! ನಾನೂ ನೀನೂ ಕಲೆತು ಅಲ್ಲಿಗೆ ಹೋಗಿದ್ದೆವು, ಆ ಕೆಲಸವನ್ನು ಮಾಡಿದೆವು; ಇಲ್ಲಿಗೆ ಹೋಗಿದ್ದೆವು, ಈ ಕೆಲಸವನ್ನು ಮಾಡಿದೆವು; ಅದನ್ನು ನೋಡಿದೆವು, ಇದನ್ನು ನೋಡಿದೆವು. ಆದರೆ ನಾವು ಇಲ್ಲಿಗೆ ಯಾವಾಗ ಬಂದೆವು?’ ಎಂದು ಪ್ರಶ್ನಿಸಿದನು. ಮೊದಲನೆಯವನಿಗೆ ಆ ಭ್ರಾಂತಿಯೇನೂ ಇಲ್ಲದ ಕಾರಣ, ‘ನಾನೆಲ್ಲಿಗೂ ಹೋಗಲಿಲ್ಲ ಇಲ್ಲೇ ಇದ್ದೆ’ ಎಂದನು. ವಾಸ್ತವವಾಗಿ ಅವನೂ ಹೋಗಿರಲಿಲ್ಲ; ಇವನೂ ಹೋಗಿರಲಿಲ್ಲ. ಎರಡನೆಯವನಿಗೆ ಆದ ಸ್ವಪ್ನದ ಭ್ರಾಂತಿಯಿಂದ ತಾನೊಬ್ಬನೇ ಅಲ್ಲದೆ ತನ್ನೊಡನೆ ಈತನೂ ಬಂದಂತೆ ತೋರಿತು. ಇವನಿಗಾದರೋ ಆ ಭ್ರಾಂತಿಯಿಲ್ಲದ ಕಾರಣ ಅವನಿಗೆ ‘ನಾನೂ ಹೋಗಲಿಲ್ಲ, ನೀನೂ ಹೋಗಲಿಲ್ಲ ಇಬ್ಬರೂ ಇಲ್ಲೇ ಮಲಗಿದ್ದೆವು. ಅದು ಬರಿಯ ಕನಸು, ಸತ್ಯವಲ್ಲ’ ಎಂದು ಆ ಮಿತ್ರನಿಗೆ

ತಿಳಿಸಿ ಹೇಳುತ್ತಾನೆ. ಇದಕ್ಕೆಲ್ಲಾ ಏನು ಕಾರಣವೆಂದರೆ ದೃಷ್ಟಿಭೇದವೇ ಕಾರಣ. ಅದೇ ರೀತಿಯಾಗಿ ಸ್ವಪ್ನಸದೃಶವಾದ ಈ ಶರೀರವನ್ನೇ 'ನಾನು' ಎಂಬ ಭ್ರಾಂತಿಯಲ್ಲಿರುವವರಿಗೆ, ಜ್ಞಾನಿಯು ಎಲ್ಲಾ ಕೆಲಸಗಳಲ್ಲೂ ತೊಡಗಿರುವಂತೆ ತೋರುತ್ತದೆಯೇ ಹೊರತು ವಾಸ್ತವವಾಗಿ ಜ್ಞಾನಿಗಳಿಗೆ ಇವು ಯಾವುದೂ ಬಾಧಿಸುವುದಿಲ್ಲ" ಎಂದು ವಿವರಿಸಿದರು.

ಇನ್ನೊಬ್ಬರು "ಜ್ಞಾನಿಯ ಕಣ್ಣುಗಳು ನೋಡುತ್ತಿರುವಂತೆ ಕಂಡರೂ ಅವರು ಯಾವುದನ್ನೂ ಕಾಣುವುದೇ ಇಲ್ಲ ಎಂದು ಹೇಳುತ್ತಾರೆ ಅಲ್ಲವೇ ?" ಎಂದರು. ಭಗವಾನರು "ಹೌದು. ಜ್ಞಾನಿಯಾದವನ ಕಣ್ಣುಗಳು ಸತ್ತ ಆಡಿನ ಕಣ್ಣುಗಳಂತೆ ಇರುತ್ತವೆ ಎಂದು ಉಪಮಾನವನ್ನು ಕೊಡುತ್ತಾರೆ. ಅವರ ಕಣ್ಣುಗಳು ಥಳಥಳಿಸುವ ಪ್ರಕಾಶದಿಂದ ಕೂಡಿ ದೊಡ್ಡದಾಗಿ ತೆರೆದು ಕೊಂಡಿದ್ದರೂ, ಅವರು ವಾಸ್ತವವಾಗಿ ಏನನ್ನೂ ನೋಡುತ್ತಿರುವುದಿಲ್ಲ. ಹೊರಗಿನವರಿಗೆ ಮಾತ್ರ ಅವರು ನೋಡುತ್ತಿರುವಂತೆ ಕಾಣಿಸುತ್ತದೆ, ಅಷ್ಟೇ" ಎಂದರು. ಆಗ ಆ ಭಕ್ತರು "ಅಂತಹ ಸಿದ್ಧಪುರುಷರಿಗೆ ಉಪಾಧಿ ಎನ್ನುವುದೂ ಸಹ ಇಲ್ಲ ಎನ್ನುತ್ತೀರೇನು ?" ಎಂದು ಕೇಳಿದರು. ಭಗವಾನರು "ಅದು ಸರಿ. ಉಪಾಧಿ ಎನ್ನುವುದೇ ಇಲ್ಲ ಎಂಬ ಮಾತು ನಿಜವೇ ಆದರೂ, ಯಾವುದೂ ಉಪಾಧಿಯಿಲ್ಲದಿದ್ದರೆ ಅವರು ಕೆಲಸಕಾರ್ಯಗಳನ್ನು ಹೇಗೆ ಮಾಡುತ್ತಾರೆಂಬ ಶಂಕೆ ಬಂದೇ ಬರುತ್ತದೆ. ಆದುದರಿಂದ ಅವರಿಗೂ ಉಪಾಧಿ ಎಂಬುದು ಇದೆ ಎಂದೇ ಹೇಳಬೇಕು. ಆದರೆ ಅದು ಸೂಕ್ಷ್ಮವಾಗಿದ್ದು ವಿದೇಹಮುಕ್ತಿ ಆಗುವವರೆಗೂ ಇರುತ್ತದೆ ಎಂದು ಹೇಳುತ್ತಾರೆ. ಅದು ಹೇಗೆ ಎಂದರೆ ನೀರಿನ ಮೇಲೆ ಗೆರೆ ಎಳೆಯುತ್ತಿರುವಾಗ ಮಾತ್ರವೇ ಆ ಗೆರೆ ಕಾಣಿಸುತ್ತದೆಯೇ ಹೊರತು ನಂತರ ಅದರ ಗುರುತೂ ಇರುವುದಿಲ್ಲ, ಅಂತೆಯೇ." ಎಂದರು.

"ಹಾಗಾದರೆ ಆ ಸಿದ್ಧಪುರುಷರಿಗೆ ಸ್ಥೂಲಶರೀರದ ಪತನಾನಂತರ ಉಪಾಧಿ ಎನ್ನುವುದು ಇರುವುದಿಲ್ಲ; ಅಲ್ಲವೇ? ಈ ಬೆಟ್ಟದ ಮೇಲೆ ಎಷ್ಟೋ ಸಿದ್ಧಪುರುಷರುಗಳು ಇದ್ದಾರೆ ಎಂಬುದು ಪುರಾಣಪ್ರಸಿದ್ಧವಾಗಿದೆಯಲ್ಲದೆ ಭಗವಾನರೂ ಸಹ ಅನೇಕ ಬಾರಿ ಹೇಳುತ್ತಿರುತ್ತಾರೆ. ಆದರೆ ಯಾವೊಂದು ಉಪಾಧಿಯೂ ಇಲ್ಲದಿರುವಾಗ ಸಿದ್ಧಪುರುಷರೆನ್ನುವವರು ಪ್ರತ್ಯೇಕವಾಗಿರು

ವುದು ಹೇಗೆ?" ಎಂದು ಆ ಭಕ್ತರು ಕೇಳಿದರು. ಭಗವಾನರು "ಇದೋ ನಿಮ್ಮ ಸಂದೇಹ! ಅದಕ್ಕೋಸ್ಕರವೇ ಆ ಸಿದ್ಧಪುರುಷರಲ್ಲೂ ಸ್ವಲ್ಪ ಭೇದ ವನ್ನು ಹೇಳುತ್ತಾರೆ. ವಿವೇಕಚೂಡಾಮಣಿಯಲ್ಲಿ,

ಕ್ಷೀರಂ ಕ್ಷೀರೇ ಯಥಾ ಕ್ಷಿಪ್ತಂ ತೈಲಂ ತೈಲೇ ಜಲಂ ಜಲೇ |
ಸಂಯುಕ್ತಮೇಕತಾಂ ಯಾತಿ ತಥಾಽಽತ್ಮನ್ಯಾತ್ಮವಿನ್ಮುನಿಃ || (565)

ಎಂದು ಹೇಳಿರುವಂತೆ ಸಂಪೂರ್ಣವಾದ ಜ್ಞಾನಪ್ರಾಪ್ತಿಯಾಗಿರುವವರು ಹಾಲಿನಲ್ಲಿ ಹಾಲು, ಎಣ್ಣೆಯಲ್ಲಿ ಎಣ್ಣೆ, ನೀರಿನಲ್ಲಿ ನೀರು ಸೇರಿ ಒಂದಾಗಿ ಹೋಗುವಂತೆ ಶರೀರದ ಪತನಾನಂತರ ಆತ್ಮನಲ್ಲಿ ಲೀನವಾಗಿಹೋಗುತ್ತಾರೆಂದೂ, ಕೆಲವರಿಗೆ ಮಾತ್ರ ಕೆಲವು ಸಂಸ್ಕಾರಗಳು ಮಿಕ್ಕಿರುತ್ತವೆಂದೂ, ಆ ಸಂಸ್ಕಾರಗಳೇ ಸಂಕಲ್ಪರೂಪಗಳಾಗಿ ಉಳಿಯುತ್ತವೆಂದೂ, ಆ ಸಂಸ್ಕಾರಗಳು ಮುಗಿಯುವವರೆಗೂ ತಮಗಿಷ್ಟಬಂದ ಶರೀರಗಳನ್ನು ಧರಿಸಿ ಲೋಕದಲ್ಲಿ ಸಂಚರಿಸುತ್ತಲೂ ಮತ್ತು ಬೇಕಾದಾಗ ಅದೃಶ್ಯರಾಗೂ ಇರುತ್ತಾರೆಂದು ಹೇಳುತ್ತಾರೆ. ಯಾವುದೋ ಒಂದು" ಎಂದು ವಿವರಿಸಿದರು.

ಆ ಭಕ್ತರು "ಈ ಭೇದಗಳು ಯಾವ ಕಾರಣದಿಂದ ಉಂಟಾಗುತ್ತದೋ?" ಎಂದು ಕೇಳಿದರು. ಭಗವಾನರು "ಅವರವರ ಸಂಕಲ್ಪದ ಬಲವನ್ನು ಅನುಸರಿಸಿ ಈ ಭೇದಗಳು ಉಂಟಾಗುತ್ತವೆ" ಎಂದು ಹೇಳಿದರು.

## ೧೯

28-10-47

## ವೈರಾಗ್ಯ, ಬೋಧ, ಉಪರತಿ

ಇತ್ತೀಚೆಗೆ ನಾನು ವಾಸುದೇವಮನನವನ್ನು ಓದುತ್ತಿದ್ದೇನೆ. ಅದರ 'ವೈರಾಗ್ಯ ಬೋಧೋಽಪರತಿ'ಯ ಅಧ್ಯಾಯದಲ್ಲಿ 'ಸಂಪೂರ್ಣವಾದ ಜ್ಞಾನಪ್ರಾಪ್ತಿಯಾದವನಿಗೆ ವೈರಾಗ್ಯ ಮತ್ತು ಉಪರತಿ (ವಿಷಯವಸ್ತುಗಳಿಂದ ಮನಸ್ಸನ್ನು ತಡೆಹಿಡಿಯುವುದು) ಗಳು ಇಲ್ಲದಿದ್ದರೂ ಮೋಕ್ಷವು ಸಿದ್ಧಿಸಬಹುದು' ಎಂಬ ವಾಕ್ಯವನ್ನು ಓದಿದಾಗ ಉಂಟಾದ ಸಂದೇಹವನ್ನು ಕುರಿತು

*

ಇಂದು ಬೆಳಿಗ್ಗೆ ಭಗವಾನರನ್ನು ಹೀಗೆ ಪ್ರಶ್ನಿಸಿದೆನು : "ಜ್ಞಾನಿಯಾದವನಿಗೆ ವೈರಾಗ್ಯವೇ ಚಿಹ್ನೆ ಎಂದಲ್ಲವೇ ಹಿರಿಯರ ವಾಕ್ಯ? ಹಾಗಾದರೆ ಮೇಲಿನದು ಹೇಗೆ ಸಂಗತವಾಗುತ್ತದೆ?"

ಭಗವಾನರು "ಜ್ಞಾನಿಗೆ ವೈರಾಗ್ಯವೇ ಚಿಹ್ನೆ ಎಂಬ ಮಾತು ಸತ್ಯವೇ. ಪ್ರಾರಬ್ಧದ ದೆಸೆಯಿಂದ ಅವರಿಗೆ ಒಂದು ವೇಳೆ ರಾಗಾದಿದೋಷಗಳುಂಟಾದರೂ ಸಹ ಅದು ಶರೀರಕ್ಕೇ ಹೊರತು ತನಗಲ್ಲವೆಂದು ಅವರು ಅರಿತಿರುತ್ತಾರೆಂದು ಅದರಲ್ಲೇ ತಿಳಿಸಿದ್ದಾರಲ್ಲಾ! ಆ ರಾಗದಿಂದ ಜೀವನ್ಮುಕ್ತಿಯ ಸುಖಕ್ಕೆ ಭಂಗವೇ ಹೊರತು ವಿದೇಹಮುಕ್ತಿಗೆ ಜ್ಞಾನವೇ ಪ್ರಧಾನ. ಜ್ಞಾನಪ್ರಾಪ್ತಿಯಾದರೆ ವೈರಾಗ್ಯ, ಉಪರತಿಗಳಿಲ್ಲದಿದ್ದರೂ ಮೋಕ್ಷಪ್ರಾಪ್ತಿಯಾಗುತ್ತದೆ, ಎಂದರೆ ಮರಣದ ಸಮಯದಲ್ಲಿ ಮೋಕ್ಷವುಂಟಾಗುತ್ತದೆ ಎಂದು ತಾತ್ಪರ್ಯ. ವೈರಾಗ್ಯ ಉಪರತಿಗಳಿದ್ದರೂ ಒಬ್ಬರಿಗೆ ಯಥಾರ್ಥ ಜ್ಞಾನವಿಲ್ಲದಿದ್ದರೆ ಮೋಕ್ಷವು ಸಿದ್ಧಿಸುವುದಿಲ್ಲ ಎಂದು ತಿಳಿದುಕೊಳ್ಳಬೇಕು. ಹಾಗಾದರೆ ಈ ವೈರಾಗ್ಯ ಉಪರತಿಗಳು ವ್ಯರ್ಥವೇನು ಎಂದು ಕೇಳಿದರೆ, ಇಲ್ಲ, ಪುಣ್ಯಲೋಕ ಪ್ರಾಪ್ತಿಗೆ ಅವು ಕಾರಣಗಳಾಗುತ್ತವೆಂದು ವಾಸುದೇವಮನನದಲ್ಲಿ ಹೇಳಿದ್ದಾರಲ್ಲಾ?" ಎಂದರು.

ನಾನು "ಅದು ಸರಿ. ಆದರೆ ವೈರಾಗ್ಯ, ಉಪರತಿಗಳು ಇಲ್ಲದಿದ್ದರೂ ಜ್ಞಾನಪ್ರಾಪ್ತಿಯು ಹೇಗೆ ಆಗುತ್ತದೆ?" ಎಂದೆ. ಭಗವಾನರು ನನ್ನೆಡೆ ವಾತ್ಸಲ್ಯದಿಂದ ನೋಡುತ್ತ "ಹೌದು. ವೈರಾಗ್ಯ, ಬೋಧ ಮತ್ತು ಉಪರತಿ ಈ ಮೂರು ಒಂದನ್ನೊಂದು ಅಗಲಿ ಇರಲಾರವು. ಜ್ಞಾನವು ದೊರಕಿದನಂತರ ಒಬ್ಬರು ರಾಗಯುಕ್ತರಾಗಿ ವರ್ತಿಸಿದಂತೆ ಕಂಡರೂ ವಿರಾಗ ಅವರ ಅಂತರ್ಯದಲ್ಲಿ ಸದಾ ಇದ್ದೇ ಇರುತ್ತದೆ. ರಾಗವು ಜೀವನ್ಮುಕ್ತಿ ಸುಖಕ್ಕೆ ಮಾತ್ರ ಅಡ್ಡಿ ಎನ್ನುತ್ತಾರೆ. ಅವರ ಪ್ರಾರಬ್ಧವು ಬಲವಾಗಿರುವುದರಿಂದ ವಾಸನೆಯ ವಶದಿಂದ ಅವರು ಹಾಗೆ ಕೆಲಸಗಳನ್ನು ಮಾಡುತ್ತಿರುತ್ತಾರೆಯೇ ಹೊರತು ವಾಸ್ತವವಾಗಿ ಅವರಿಗೆ ರಾಗ ಅಂಟುವುದಿಲ್ಲ. ಅದಕ್ಕೇ ಪ್ರಾರಬ್ಧ ಎಂದು ಕರೆಯುತ್ತಾರೆ" ಎಂದು ವಿವರಿಸಿದರು.

ನಾನು "ಹಾಗಾದರೆ ಸ್ವಸ್ವರೂಪಜ್ಞಾನ ಪ್ರಾಪ್ತಿಯಾದರೂ ಪ್ರಾರಬ್ಧವು ಬಲವಾಗಿದ್ದರೆ ವಾಸನೆಗಳನ್ನು ನಾಶಮಾಡಿಕೊಳ್ಳಲಾರರು

ಎಂದ ಹಾಗಾಯಿತು. ಆ ವಾಸನಾಕ್ಷಯವಾಗುವ ತನಕ ಭಂಗವಾಗದ ಶಾಂತಿಯು ಲಭಿಸುವುದಿಲ್ಲ ಅಲ್ಲವೇನು ?" ಎಂದೆ. ಭಗವಾನರು "ಹೌದು. ವೈರಾಗ್ಯ, ಬೋಧ, ಉಪರತಿ ಈ ಮೂರೂ ಸ್ಥಿರವಾಗಿರುವವರು ಬಹಳ ಉನ್ನತಸ್ಥಿತಿಯಲ್ಲಿರುವವರೇ. ಅವರನ್ನೇ ಜೀವನ್ಮುಕ್ತರು ಎಂದು ಕರೆಯುತ್ತಾರೆ. ಹಾಗಿಲ್ಲದೆ ಜ್ಞಾನವೇ ಪ್ರಧಾನವಾಗಿರುವವರು ಪ್ರಾರಬ್ಧವಶದಿಂದ ರಾಗಯುಕ್ತರಾಗಿ ವ್ಯವಹರಿಸಿದರೂ, ಅವು ಯಾವುವೂ ತಮಗೆ ಸಂಬಂಧಿಸಿಲ್ಲ ಎಂದು ತಿಳಿದುಕೊಂಡೇ ಇರುತ್ತಾರೆ. ನಿಜವಾಗಿ ರಾಗ ಅವರಿಗೆ ಅಂಟುವುದಿಲ್ಲ. ಇದಕ್ಕೇ ಯೋಗವಾಸಿಷ್ಠದಲ್ಲಿ ಮೂರನೆಯ ಭೂಮಿಕೆಯಲ್ಲಿ ವಾಸನಾಕ್ಷಯವಾಗಿ ಮನಸ್ಸು ನಾಶವಾಗುತ್ತದೆ ಎನ್ನುತ್ತಾರೆ. ನಾಲ್ಕನೇ ಭೂಮಿಕೆಯನ್ನು ಹೊಂದಿದನಂತರ ಐದು ಮತ್ತು ಆರನೆಯ ಭೂಮಿಕೆಯಲ್ಲೇನು ಕೆಲಸ ? ಎಂದು ಕೇಳಿದರೆ ಎಲ್ಲವೂ ವಾಸನಾಕ್ಷಯಕ್ಕೇ ಎಂದು ಏನೇನೋ ಸಮಾಧಾನ ಹೇಳುತ್ತಾರೆ. ಸಂಶಯಗಳು ಎಲ್ಲಿಯವರೆಗೆ ಇರುತ್ತವೋ ಅಲ್ಲಿಯವರೆಗೂ ಸಮಾಧಾನಗಳಿವೆ. ಸಂಶಯರಹಿತವಾದ ಸ್ಥಿತಿಯೇ ಜ್ಞಾನಿಯ ಸ್ಥಿತಿ" ಎಂದು ವಿವರಿಸಿದರು.

ನಾನು "ಜ್ಞಾನಿಯಾದವನಿಗೆ ವೈರಾಗ್ಯವು ಎಷ್ಟೆಷ್ಟು ಹೆಚ್ಚುತ್ತದೋ ಅಷ್ಟಷ್ಟು ಶಾಂತಿ ಮತ್ತು ಸುಖ ಲಭಿಸುತ್ತದೆ; ಅದು ಎಷ್ಟೆಷ್ಟು ಕಡಿಮೆಯಾಗುತ್ತದೋ ಅಷ್ಟಷ್ಟು ಶಾಂತಿಯೂ ದೂರವಾಗುತ್ತದೆ ಎಂಬುದೇ ಇದರ ಅರ್ಥ ಅಲ್ಲವೇ ?" ಎಂದೆ. ಭಗವಾನರು "ಹೌದು, ಹೌದು" ಎನ್ನುತ್ತ ಮೌನವನ್ನು ವಹಿಸಿದರು.

## ೨೦

29–10–47

## ವಿವಿಧ ಭಾಷೆಗಳ ಪರಿಚಯ

ಇಂದು ಮಧ್ಯಾಹ್ನ ಎರಡೂವರೆ ಗಂಟೆಯಲ್ಲಿ ಭಗವಾನರು ಯಾವುದೋ ಮಲಯಾಳಂ ಭಾಷೆಯ ಪುಸ್ತಕವೊಂದನ್ನು ಓದುತ್ತ ಸಮೀಪದಲ್ಲಿ ಕುಳಿತಿದ್ದ ಒಬ್ಬ ಭಕ್ತರೊಡನೆ ಮಾತಾಡುತ್ತಿದ್ದರು.

ಆ ಭಕ್ತರು "ಭಗವಾನರು ಮಲೆಯಾಳಂ ಭಾಷೆಯನ್ನು ಬಾಲ್ಯದಲ್ಲೇ ಕಲಿತರೇನು?" ಎಂದು ಕೇಳಿದರು. ಭಗವಾನರು "ಇಲ್ಲ. ಗುರುಮೂರ್ತ ದಲ್ಲಿರುವಾಗ ನನ್ನೊಡನೆ ಪಳನಿಸ್ವಾಮಿಯೂ ಇರುತ್ತಿದ್ದನಲ್ಲವೇ? ಅವನು ಅಧ್ಯಾತ್ಮರಾಮಾಯಣವೊಂದನ್ನು ತನ್ನ ಬಳಿ ಇಟ್ಟುಕೊಂಡಿದ್ದು ಆಗಾಗ ಅದನ್ನು ತೆರೆದು ಓದಿಕೊಳ್ಳುತ್ತಿದ್ದನು. ಓದುಬರಹ ಬರುವ ಪ್ರತಿಯೊಬ್ಬ ಮಲೆಯಾಳಿಯೂ ತಪ್ಪದೇ ಆ ಗ್ರಂಥವನ್ನು ಓದುತ್ತಾನೆ. ಆದುದರಿಂದ ಅವನಿಗೆ ಅದನ್ನು ಸರಿಯಾಗಿ ಓದಲು ಬಾರದಿದ್ದರೂ ತನಗೆ ಬಂದಹಾಗೆ ತಪ್ಪುತಪ್ಪಾಗಿ ಓದಿಕೊಳ್ಳುತ್ತಿದ್ದನು. ಆಗ ನಾನು ಕೇವಲ ಮೌನಸ್ವಾಮಿ ಯಷ್ಟೆ; ಅದನ್ನು ಕೇಳಿಸಿಕೊಂಡರೂ ಸುಮ್ಮನಿರುತ್ತಿದ್ದೆ. ನಾವು ತಾಳೆಯ ಮರಗಳಿದ್ದ ತೋಪಿಗೆ ನಮ್ಮ ನಿವಾಸವನ್ನು ಬದಲಾಯಿಸಿದನಂತರ ಒಂದು ದಿನ ಆ ಪುಸ್ತಕವನ್ನು ತೆರೆದು ನೋಡಿದಾಗ ಅದು ಗ್ರಂಥಾಕ್ಷರದ ಲಿಪಿ ಯಲ್ಲಿಯೇ ಇತ್ತು. ಆ ವೇಳೆಗೇ ನನಗೆ ಗ್ರಂಥಾಕ್ಷರಗಳ ಪರಿಚಯವಿದ್ದ ಕಾರಣ ಆ ಭಾಷೆಯಲ್ಲಿ ಸುಲಭವಾಗಿ ಬರೆಯುವುದನ್ನೂ ಓದುವುದನ್ನೂ ಕಲಿತುಕೊಂಡೆ. ಆ ತರುವಾಯ ನಾನು ಅವನಿಗೇ ಪಾಠ ಹೇಳಿಕೊಡುತ್ತಿದ್ದೆ" ಎಂದರು.

ಇನ್ನೊಬ್ಬರು "ತೆಲುಗು ಭಾಷೆಯನ್ನು ಯಾವಾಗ ಕಲಿತಿರಿ?" ಎಂದು ಕೇಳಿದರು. ಭಗವಾನರು "ನಾನು ವಿರೂಪಾಕ್ಷ ಗುಹೆಯಲ್ಲಿರುವಾಗ. ಆಗ ಗಂಭೀರಂ ಶೇಷಯ್ಯರ್ ಮೊದಲಾದವರು ಯಾವುದಾದರೊಂದು ಶ್ಲೋಕ ವನ್ನು ತೆಲುಗು ಅಕ್ಷರಗಳಲ್ಲಿ ಬರೆದುಕೊಡಿ ಎಂದು ಕೇಳಿದಾಗ ಪುಸ್ತಕದಲ್ಲಿನ ತೆಲುಗು ಅಕ್ಷರಗಳನ್ನು ನೋಡಿ ಅದರಂತೆಯೇ ಬರೆದುಕೊಡುತ್ತಿದ್ದೆ. ಕ್ರಮೇಣ ಹಾಗೆಯೇ ಅಭ್ಯಾಸವಾಯಿತು. ಇದು ಸುಮಾರು 1900ನೆಯ ಇಸವಿ ಯಲ್ಲೇ" ಎಂದರು. "ದೇವನಾಗರೀ ಲಿಪಿಯನ್ನು ಕಲಿತದ್ದು ಯಾವಾಗ?" ಎಂದು ನಾನು ಕೇಳಿದೆ. "ಅದೂ ಅಲ್ಲಿರುವಾಗಲೇ" ಎನ್ನುತ್ತ ಪಕ್ಕದಲ್ಲಿದ್ದ ಹಳೆಯ ಭಕ್ತರೆಡೆಗೆ ತಿರುಗಿ, ಭಗವಾನರು "ಮುತ್ತುರಾಮ ದೀಕ್ಷಿತರೇ ಮೊದಲಾದವರೆಲ್ಲರೂ ಇಲ್ಲಿಗೆ ಬರುತ್ತ ಹೋಗುತ್ತ ಇದ್ದರು. ಅವರ ಬಳಿಯಿದ್ದ ದೇವನಾಗರೀ ಲಿಪಿಯಲ್ಲಿದ್ದ ಪುಸ್ತಕಗಳನ್ನು ನೋಡಿ ನೋಡಿ ಬರೆಯುತ್ತಿದ್ದೆ. ಅದು ಹಾಗೆಯೇ ಅಭ್ಯಾಸವಾಯಿತು" ಎಂದು ತಿಳಿಸಿದರು. ಮತ್ತೊಬ್ಬರು

" ನಾಯನರು ಬಂದನಂತರವೇ ಭಗವಾನರು ತೆಲುಗನ್ನು ಕಲಿತಿದ್ದು ಎಂದು ಕೇಳಿದ್ದೇವಲ್ಲಾ? " ಎಂದರು. ಭಗವಾನರು "ಇಲ್ಲ. ಅವರು ಬಂದನಂತರ ಚೆನ್ನಾಗಿ ತೆಲುಗಿನಲ್ಲಿ ಮಾತಾಡುವುದು ಅಭ್ಯಾಸವಾಯಿತು, ಅಷ್ಟೆ" ಎಂದರು.

ಇನ್ನೊಬ್ಬರು " ಭಗವಾನರು ಚಿಕ್ಕಂದಿನಲ್ಲೇ ತೆಲುಗನ್ನು ಕಲಿತಿದ್ದರೆಂದು ಕೇಳಿದ್ದೇವಲ್ಲಾ? " ಎಂದರು. ಭಗವಾನರು " ಆಗ ಓದುವುದು ಬರೆಯುವುದು ಬರುತ್ತಿರಲಿಲ್ಲ. ನಮ್ಮ ಚಿಕ್ಕ ತಾತನಿಗೆ ತೆಲುಗು ಗೊತ್ತಿತ್ತು. ಅವರು ನನ್ನನ್ನು ತಮ್ಮ ಬಳಿ ಕುಳ್ಳಿರಿಸಿಕೊಂಡು ' ಕ ದೀರ್ಘ ಕಾ....' ಮೊದಲಾಗಿ ಹೇಳಿಕೊಡುತ್ತ ಅಕ್ಷರಗಳನ್ನು ಕಲಿಸಿದ್ದರು, ಅಷ್ಟೇ. ಶ್ಲೋಕಗಳನ್ನು ಬರೆಯುವಾಗಲೇ ನಾನು ತೆಲುಗು ಭಾಷೆಯನ್ನು ಕಲಿತದ್ದು. ಆ ತರುವಾಯ ಉಪದೇಶಸಾರವನ್ನು ಬರೆದಾಗ ಯೋಗಿ ರಾಮಯ್ಯ ಅದನ್ನು ತೆಲುಗಿನಲ್ಲೂ ಬರೆಯಬೇಕೆಂದಾಗ, ತಮಿಳು ಛಂದಸ್ಸನ್ನು ಅನುಸರಿಸಿ ಕೆಲವು ದ್ವಿಪದಿಗಳನ್ನು ಬರೆದು ನಾಯನರಿಗೆ ತೋರಿಸಲು, ಅವರು " ಇದು ತೆಲುಗು ದ್ವಿಪದಿಯಾಗುವುದಿಲ್ಲ, ತಮಿಳಿನದಾಗುತ್ತದೆ ಎಂದು ತಿಳಿಸಿ, ತೆಲುಗು ದ್ವಿಪದಿಗೆ ಗಣಗಳನ್ನು ಹೇಳಿಕೊಟ್ಟರು. ಆ ಗಣಗಳನ್ನು ಅನುಸರಿಸಿ ತಮಿಳಿನಲ್ಲಿ ಒಂದು ಚಿಕ್ಕ ಸೂತ್ರವನ್ನು ಬರೆದಿಟ್ಟುಕೊಂಡೆ. ಅದನ್ನನುಸರಿಸಿ ಸ್ವಲ್ಪ ಮಾರ್ಪಾಡುಗಳನ್ನು ಮಾಡಲು ಅದು ಗಣಗಳಿಗೆ ಸರಿಹೊಂದಿಕೊಂಡಿತು. ಆಗ ನಾಯನರಿಗೆ ತೋರಿಸಿದಾಗ ' ಈಗ ಸರಿಹೋಯಿತು ' ಎಂದು ಹೇಳಿ ಅದನ್ನು ತಾವು ಕೊಂಚವೂ ತಿದ್ದದೆ, ' ಹಾಗೆಯೇ ಅಚ್ಚುಹಾಕಿಸಬಹುದು ' ಎಂದರು. ಆ ತರುವಾಯ ಬಲರಾಮರೆಡ್ಡಿಯವರು ' ಸುಲಕ್ಷಣಸಾರ 'ವನ್ನು ತಂದಾಗ ಅದನ್ನು ನೋಡಿ ಉಳಿದ ವೃತ್ತಗಳ ಗಣಗಳನ್ನು ಸಂಗ್ರಹಿಸಿ ಎರಡು ಪುಟಗಳಲ್ಲಿ ಬರೆದುಕೊಂಡು ಅದನ್ನು ನನ್ನ ತೆಲುಗು ಬಾಲಬೋಧೆಯಲ್ಲಿ ಅಂಟಿಸಿಟ್ಟುಕೊಂಡೆ. ನನಗೆ ಅದೇ ಸಾಕಾಯಿತು. ಈಗ ಯಾರಾದರೂ ಒಂದು ತೆಲುಗು ಪದ್ಯವನ್ನು ಓದಿದರೆ ಅದು ಯಾವ ವೃತ್ತದಲ್ಲಿದೆ ಮತ್ತು ಎಲ್ಲಿ ತಪ್ಪಾಗಿದೆ ಎಂದು ಸುಲಭವಾಗಿ ಗೊತ್ತಾಗುತ್ತದೆ. ಒಂದೊಂದು ಭಾಷೆಯೂ ಹೀಗೆಯೇ ಅಭ್ಯಾಸವಾಯಿತು. ಉದ್ದೇಶಪೂರ್ವಕವಾಗಿ ನಾನು ಯಾವ ಭಾಷೆಯನ್ನೂ ಕಲಿಯಲಿಲ್ಲ " ಎಂದು ವಿವರಿಸಿದರು.

30-10-47

## ತುರೀಯಾವಸ್ಥೆ

ಇಂದು ಬೆಳಿಗ್ಗೆ ತಮಿಳುಭಕ್ತರೊಬ್ಬರು ಭಗವಾನರನ್ನು ಉದ್ದೇಶಿಸಿ "ಸ್ವಾಮೀ! ಜೀವ, ಈಶ್ವರ ಇವರನ್ನು ಬಿಟ್ಟು ಜಗತ್ತು ಇಲ್ಲ ಎಂದು ಹೇಳುತ್ತಾರೆ. ಇದರ ಅರ್ಥವೇನು?" ಎಂದು ಪ್ರಶ್ನಿಸಿದರು. ಭಗವಾನರು "ಹೌದು. ಜೀವ, ಜಗತ್ತು ಮತ್ತು ಈಶ್ವರ ಇವು ತ್ರಿಗುಣಾತ್ಮಕವೇ ಅಲ್ಲವೇ?" ಎಂದರು. ಅವರು "ಹಾಗಾದರೆ ಈಶ್ವರನನ್ನೂ ತ್ರಿಗುಣಗಳ ಸಮಷ್ಟಿಯಲ್ಲಿ (ಸತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳು ಒಟ್ಟುಗೂಡಿರುವುದು) ಸೇರಿಸಬೇಕೇ?" ಎಂದರು. ಭಗವಾನರು "ಹೌದು. ಸಮಷ್ಟಿಯಾದ ಸತ್ವವನ್ನೇ ಈಶ್ವರನೆಂದೂ, ಸಮಷ್ಟಿಯಾದ ರಜಸ್ಸನ್ನೇ ಜೀವನೆಂದೂ ಮತ್ತು ಸಮಷ್ಟಿಯಾದ ತಮಸ್ಸನ್ನೇ ಜಗತ್ತೆಂದೂ ಹೇಳುತ್ತಾರೆ. ಶುದ್ಧ ಸತ್ವವೇ ಆತ್ಮಸ್ವರೂಪನಾದ ತಾನು" ಎಂದು ಉತ್ತರವಿತ್ತರು.

ಅಲ್ಲೇ ಇದ್ದ ಬಂಗಾಳದ ಯುವಕನೊಬ್ಬನು "ಸ್ವಾಮೀ! ಸಮಾಧಿಸ್ಥಿತಿಯಲ್ಲಿ ಕೇವಲ ನಿರ್ವಿಕಲ್ಪವೆಂದೂ, ಸಹಜ ನಿರ್ವಿಕಲ್ಪವೆಂದೂ ಎರಡು ವಿಧವಾಗಿ ಬಣ್ಣಿಸಿದ್ದಾರೆ. ಅವುಗಳ ಲಕ್ಷಣಗಳೇನು?" ಎಂದು ಪ್ರಶ್ನಿಸಿದನು. ಭಗವಾನರು ಅವನೆಡೆಗೆ ಅನುಗ್ರಹದೃಷ್ಟಿಯನ್ನು ಬೀರಿ, "ಸಹಜವಾಗಿ ಧ್ಯಾನದಲ್ಲಿ ನಿಷ್ಠನಾಗಿ ಸಮಾಧಿಸುಖವನ್ನು ಅನುಭವಿಸುವಾತನು ತಾನು ಯಾವ ಕೆಲಸದಲ್ಲಿ ನಿರತನಾಗಿದ್ದರೂ ಆ ಸಮಾಧಿಸ್ಥಿತಿಯಿಂದ ಕದಲುವುದಿಲ್ಲ. ಏನೇ ಸಂಕಲ್ಪ-ವಿಕಲ್ಪಗಳು ಬರಲಿ ಆತನು ತಾನು ತಾನಾಗಿಯೇ ಇರುತ್ತಾನೆ. ಅದಕ್ಕೆ ಸಹಜ ನಿರ್ವಿಕಲ್ಪ ಎಂದು ಹೇಳುತ್ತಾರೆ. ಕೇವಲ ನಿರ್ವಿಕಲ್ಪವೆಂದರೆ ವಾಸನೆಗೆ ವಶವಾಗಿ ಮೆರೆಯುವ ಮನಸ್ಸನ್ನು ಬಲಾತ್ಕಾರವಾಗಿ ಅಡಗಿಸಿ ಸಮಾಧಿನಿಷ್ಠನಾಗುವುದು ಎಂದು. ಈ ವಿಧವಾಗಿ ಸಮಾಧಿಯನ್ನು ಪಡೆದವರು ಮೌನವಾಗಿ ಕದಲದೆ ಆ ಸ್ಥಿತಿಯಲ್ಲಿ ಕೆಲವು ಕಾಲವಿದ್ದು ಮತ್ತೆ ಹಿಂದಿನಂತೆ ಬಾಹ್ಯಸ್ಫುರಣೆಯನ್ನು ಪಡೆಯುತ್ತಾರೆ. ಇವುಗಳಿಗೇ (ಮನೋ) ನಾಶ ಮತ್ತು (ಮನೋ) ಲಯ ಎನ್ನುತ್ತಾರೆ. ಮನೋನಾಶಕ್ಕೇ ಸಹಜ

ನಿರ್ವಿಕಲ್ಪವೆಂದೂ, ಮನೋಲಯಕ್ಕೇ ಕೇವಲ ನಿರ್ವಿಕಲ್ಪವೆಂದೂ ಹೆಸರು. ಲಯ ಸಮಾಧಿಸ್ಥಿತಿಯಲ್ಲಿರುವವರ ಮನಸ್ಸು ಹೊರಮುಖವಾದಾಗ ಮತ್ತೆ ಮತ್ತೆ ಅದನ್ನು ನಿಗ್ರಹಿಸಿ ವಶಪಡಿಸಿಕೊಳ್ಳಬೇಕಾಗುತ್ತದೆ. ಮನೋನಾಶ ವಾದರೆ ಹುರಿದ ಬೀಜದಂತೆ ಅದು ಮತ್ತೆ ಮೊಳೆಯುವುದಿಲ್ಲ. ಅಂತಹವರು ಏನು ಮಾಡಿದರೂ ಅದು ನಿಮಿತ್ತ ಮಾತ್ರವೇ. ತಮ್ಮ ಆ ನೈಜಸ್ಥಿತಿಯಿಂದ ಅವರು ಎಂದಿಗೂ ಜಾರುವುದಿಲ್ಲ. (ಮನಸ್ಸು) ಕೆಳಗಿಳಿಯುವುದು, ಮತ್ತೆ ಮೇಲೇರುವುದು ಹೀಗಿರುವವರೆಗೂ ಅವರು ಸಾಧಕರೇ ಹೊರತು ಸಿದ್ಧರಲ್ಲ. ಸಹಜ ನಿರ್ವಿಕಲ್ಪನಿಷ್ಠರು ನಿವಾತದೀಪದಂತೆ (ಗಾಳಿಯಿಲ್ಲದ ಕಡೆ ಸ್ಥಿರವಾಗಿ ಉರಿಯುವ ದೀಪದಂತೆ)ಯೂ, ತರಂಗರಹಿತವಾದ ಸಮುದ್ರದಂತೆಯೂ ಚಲನರಹಿತರಾಗಿರುತ್ತಾರೆ. ಅವರಿಗೆ ಯಾವುದೂ ತಮಗಿಂತ ಭಿನ್ನವಾಗಿರು ವಂತೆ ತೋರುವುದಿಲ್ಲ. ಅಜ್ಞಾನಿಗಳಿಗಾದರೋ ಎಲ್ಲವೂ ತಮಗಿಂತ (ಆತ್ಮನಿಗಿಂತ) ಬೇರೆಯಾಗಿಯೇ ಕಾಣುತ್ತದೆ. ಇದೇ ವ್ಯತ್ಯಾಸ" ಎಂದರು.

ಎರಡು ದಿನಗಳ ಹಿಂದೆ ಶ್ರೀರಾಮಕೃಷ್ಣ ಮಠದ ಸನ್ಯಾಸಿಯೊಬ್ಬರು "ತುರೀಯಾವಸ್ಥೆ ಎಂದರೇನು?" ಎಂದು ಪ್ರಶ್ನಿಸಿದರು. ಭಗವಾನರು "ತುರೀಯಾವಸ್ಥೆ ಎಂದು ಪ್ರತ್ಯೇಕವಾಗಿ ಏನೂ ಇಲ್ಲ. ಸ್ವಸ್ವರೂಪವೇ ತುರೀಯ" ಎಂದರು. ಅವರು "ಮತ್ತೆ ತುರೀಯವೆಂದೂ, ತುರೀಯಾತೀತ ವೆಂದೂ ಹೇಳುತ್ತಾರಲ್ಲಾ?" ಎಂದು ಕೇಳಿದರು. ಭಗವಾನರು "ಇರುವು ದೊಂದೇ ಅವಸ್ಥೆ. ಅದನ್ನೇ ತುರೀಯ ಎನ್ನಿರಿ. ತುರೀಯಾತೀತ ಎನ್ನಿರಿ; ಹೇಗೆ ಹೇಳಿದರೂ ಸರಿ. ಜಾಗ್ರತ್ತು, ಸ್ವಪ್ನ ಮತ್ತು ಸುಷುಪ್ತಿ ಈ ಮೂರೂ ಅವಸ್ಥೆಗಳು ಒಂದಾದಮೇಲೆ ಒಂದರಂತೆ ಚಿತ್ರಪಟದ ತೆರೆಯಮೇಲಿನ ದೃಶ್ಯಗಳು ಬದಲಾಗುವಂತೆ ಬದಲಾಗುತ್ತಿರುತ್ತವೆ. ಆದರೆ ಈ ಮೂರೂ ಕೇವಲ ತೋರಿಕೆಗಳೇ. ಈ ಮೂರೂ ಸ್ಥಿತಿಗಳಿಗೂ ಮೀರಿ ಸಾಕ್ಷಿಯಾಗಿರು ವುದು ಯಾವುದೋ ಅದೇ 'ತಾನು'. ಈ ಮೂರೂ ಅವಸ್ಥೆಗಳನ್ನು ತೆಗೆದು ಹಾಕಿಬಿಟ್ಟರೆ ಆಗ ಉಳಿಯುವುದು ತಾನೇ ಅಲ್ಲವೇ? ಅದೇ ತುರೀಯಾವಸ್ಥೆ. ಪಾರಿಭಾಷಿಕವಾಗಿ ಅದನ್ನೇ ತುರೀಯವೆಂದೂ ತುರೀಯಾತೀತವೆಂದೂ ಅನೇಕ ಬಗೆಯಾಗಿ ಹೇಳುತ್ತಾರೆ. ಆದರೂ ವಾಸ್ತವವಾಗಿ ಇರುವುದು ಒಂದೇ ಅವಸ್ಥೆ" ಎಂದು ವಿವರಿಸಿದರು.